ನೆಹರೂ ಬಾಲ ಪುಸ್ತಕಾಲಯ

# ಚಲನಚಿತ್ರಗಳ ನಿರ್ಮಾಣ

ಖ್ವಾಜಾ ಅಹಮ್ಮದ್ ಅಬ್ಬಾಸ್

ಅನುವಾದ

ಪ್ರೇಮಾ ಕಾರಂತ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



ಹೊರಾಂಗಣ ಚಿತ್ರೀಕರಣ: ಕ್ರೇನಿನ ಮೇಲೆ ಛಾಯಾಗ್ರಾಹಕ ಯಂತ್ರ

# ಪರದೆಯ ಮೇಲಿನ ಇಂದ್ರಜಾಲ

ಕಿಕ್ಕಿರಿದ ಹಾಲಿನಲ್ಲಿ ದೀಪಗಳು ಆರುತ್ತಿದ್ದಂತೆ ಗುಜುಗುಜು ಸದ್ದು ಕಮ್ಮಿಯಾಗುತ್ತಾ ಹೋಗುತ್ತದೆ.

ಪಾಪ್‌ಕಾರನ್ ತಿನ್ನುವ ಶಬ್ದ ಮತ್ತು ಉಪ್ಪೇರಿಯ (ಚಿಪ್ಸ್) ಕರಂಕರಂ ಸದ್ದೂ ಕೊನೆಗೊಳ್ಳುತ್ತಾ ಹೋಗುತ್ತದೆ.

ಎಲ್ಲರ ಕಣ್ಣುಗಳೂ ಬೆಳ್ಳಿಯಂತೆ ಬೆಳಗುವ 'ರಜತ ಪರದೆ'ಯ ಕಡೆ ತಿರುಗುತ್ತವೆ.

ಆಗ ಇಂದ್ರಜಾಲದ ಆಟ ಪ್ರಾರಂಭವಾಗುತ್ತದೆ. ಪರದೆಯ ಮೇಲೆ ದಂತ ಪಂಡಿತರ ಹಲ್ಲು ಪುಡಿಯದೋ ಅಥವಾ ಟಾಯಿಲೆಟ್ ಸೋಪಿನದೋ ಪ್ರಚಾರ ನಡೆದಿರಬಹುದು. ಅದು ಕಪ್ಪು ಬಿಳುಪು ಅಥವಾ ವರ್ಣಚಿತ್ರವಾಗಿರಬಹುದು. ಭಾರತ ಸರ್ಕಾರದ ಚಲನಚಿತ್ರ ವಿಭಾಗದಿಂದ ತಯಾರಾದ ಭಾರತೀಯ ಸಮಾಚಾರ ಚಿತ್ರವೇ ಆಗಿರಬಹುದು — ಮಂತ್ರಿಗಳ ಭಾಷಣ, ಸಿಪಾಯಿಗಳ ಪ್ರದರ್ಶನ, ಬಸ್ಸನ್ನು ಸುಡುತ್ತಿರುವ ಅಥವಾ ಕಲ್ಲು ಎಸೆಯುತ್ತಿರುವ ಸಿಟ್ಟಿಗೆದ್ದ ಚಳವಳಿಗಾರರು, ಆಟವಾಡುತ್ತಿರುವ, ನಗುತ್ತಿರುವ ಮುದ್ದಾದ ಮಕ್ಕಳು ಮುಂತಾದುವು. ಅದು ಅಲ್ಲದಿದ್ದರೆ ನಿಮ್ಮ ಪ್ರೀತಿಯ ನಾಯಕ-ನಾಯಕಿಯರು — ಅಮಿತಾಬ್ ಬಚ್ಚನ್, ರಾಜೇಶ್ ಖನ್ನಾ, ಧರ್ಮೇಂದ್ರ, ದೇವಾನಂದ್, ಹೇಮಾಮಾಲಿನಿ, ಜಯಪ್ರದ,

ಪರ್ವೀನ್ ಬಾಬಿ ಮುಂತಾದವರು — ನಟಿಸಿರುವ ವರ್ಣಚಿತ್ರ ಕಥೆಯೇ ಆಗಿರ ಬಹುದು. ಏನೇ ಆಗಲಿ ಇಂದ್ರಜಾಲ ಮಾತ್ರ ಯಾವಾಗಲೂ ಒಂದೇ — ಪರದೆಯ ಮೇಲೆ ಚಲಿಸುವ ಚಿತ್ರಗಳ ಮಾಯಾಜಾಲ. ಕಾರುಗಳ ರೇಸು, ಓಡುತ್ತಿರುವ ರೈಲುಗಳು, ನಾಗಾಲೋಟದ ಕುದುರೆಗಳು, ಒಂದು ಡಜನ್ ಖಳನಾಯಕರ ಜೊತೆ ಹೋರಾಡು ತ್ತಿರುವ ನಾಯಕ, ನೃತ್ಯ ಮಾಡುತ್ತಿರುವ ನಾಯಕಿ; ನಗುತ್ತಾ ನಗಿಸುತ್ತಿರುವ ಹಾಸ್ಯ ನಟರು, ಎಲ್ಲಾ ಚಲನೆ — ಇಂದ್ರಜಾಲ.

ಕತ್ತಲೆಯಾದ ಚಿತ್ರಮಂದಿರದಲ್ಲಿ ಬೆಳಕಿನ ಒಂದು ಕಿರಣದ ಮೂಲಕ ಚಿತ್ರ ಗಳನ್ನು ಪರದೆಯ ಮೇಲೆ ಬಿಡುತ್ತಾರೆ ಎಂಬುದು ನಿಮಗೆಲ್ಲಾ ಗೊತ್ತು. ಆದರೆ ಚಿತ್ರಗಳಿಗೆ ಬಣ್ಣ ಎಲ್ಲಿಂದ ಬಂತು? ಚಿತ್ರಗಳು ಹೇಗೆ ಚಲಿಸುತ್ತವೆ? ಹೇಗೆ ಹಾಡುತ್ತವೆ? ಹೇಗೆ ಮಾತನಾಡುತ್ತವೆ?

ನಿಮ್ಮನ್ನು ಎಲ್ಲಿಗೋ ಕೊಂಡೊಯ್ಯುವ ಈ ಇಂದ್ರಜಾಲ... ಎಲ್ಲಿಗೆ? ಯಕ್ಷಿಣಿಯರ ಲೋಕಕ್ಕೆ, ಅಲ್ಲಿನ ನಾಯಕಿಯರು ಸುಂದರಿ ಯರು. ನಾಯಕರು ಸೊಗಸು ಸಾಹಸಗಾರರು, ಖಳನಾಯಕರು ಕಪ್ಪು ಪಿಶಾಚಿಗಳು. ನಿಮ್ಮ ಪಟ್ಟಣದಿಂದ, ನಿಮ್ಮ ಹಳ್ಳಿಯಿಂದ, ನಿಮ್ಮ ಊರಿನಿಂದ ದೂರ ನೀವು ಕಂಡರಿಯದ ದೇಶಕ್ಕೆ ಕೊಂಡೊಯ್ಯುತ್ತದೆ. ಕತ್ತಲೆಯ ಹಾಲಿನಲ್ಲಿ ಇಂದ್ರಜಾಲ ಮುಂದುವರೆಯುವವರೆಗೆ ಅದು ಇರುತ್ತದೆ. ಪರದೆಯಿಂದ ಚಿತ್ರಗಳು ಮಾಯ ಆಗುತ್ತಲೇ, ಹಾಲಿನಲ್ಲಿ ದೀಪಗಳು ಬೆಳಗುತ್ತಲೇ ಆ ಮೋಹಕತೆ ಮಾಯವಾಗುತ್ತದೆ.



ಶಬನಾ ಆಜ್ಮಿ

ರಜತ ಪರದೆಯ ಮೇಲೆ ಚಲಿಸುತ್ತಿರುವ ಚಿತ್ರಗಳ ಬಗ್ಗೆ ನಿಮಗೆ ಆಶ್ಚರ್ಯ ಎನಿಸಬಹುದು. ಇವೆಲ್ಲಾ ಹೇಗಾಗುತ್ತವೆ? ಯಾರು ಮಾಡುತ್ತಾರೆ? ಅಂದರೆ ಚಲನಚಿತ್ರ ಹೇಗೆ ತಯಾರಾಗುತ್ತದೆ ಎಂಬುದನ್ನು ನೀವು ಅರಿಯಬೇಕು.



## ಚಲಿಸದ ಚಲನ ಚಿತ್ರಗಳು

ಪರದೆಯ ಮೇಲೆ ಚಿತ್ರಗಳನ್ನು ಚಲಿಸುವಂತೆ ಮಾಡುವ ಮಂತ್ರವೇ ವಿಜ್ಞಾನ.

ನಿಜವಾಗಿ ಚಿತ್ರಗಳು ಚಲಿಸುವುದೇ ಇಲ್ಲ; ನಿಮಗೆ ಅದು ಚಲಿಸುತ್ತಿರುವಂತೆ ಕಾಣುತ್ತದೆ, ಅಷ್ಟೇ. ಅವು ಕಪ್ಪು-ಬಿಳುಪು ಅಥವಾ ವರ್ಣಪಾರದರ್ಶಕ ಫಿಲ್ಮ್‌ನಲ್ಲಿರುವ ಸನ್ನಿವೇಶಗಳ ಸ್ಥಿರವಾದ, ಅಲ್ಲಾಡದ ಪ್ರತಿಬಿಂಬಗಳು. ಈ ಚಿತ್ರಗಳು ಅಂಚೆ ಚೀಟಿಗಿಂತ ಸ್ವಲ್ಪ ದೊಡ್ಡದಾಗಿರುತ್ತವೆ. ದೊಡ್ಡದಾದ ಪರದೆಯ ಮೇಲೆ ಅವುಗಳನ್ನು ಪ್ರತಿಬಿಂಬಿಸಿದಾಗ ಅವು ನೂರಾರು ಪ್ರಮಾಣ ದೊಡ್ಡದಾಗಿ ಕಾಣುತ್ತವೆ. ಸಿನೆಮಾ ಆಪರೇಟರ್ ಕೋಣೆಯಿಂದ ಹೆಚ್ಚು ಪ್ರಕಾಶವುಳ್ಳ ಬೆಳಕಿನ ಕಿರಣದ ಮೂಲಕ ಈ ಪ್ರತಿಬಿಂಬಗಳನ್ನು ಪರದೆಯ ಮೇಲೆ ಬಿಡುತ್ತಾರೆ.

ಚಲನಚಿತ್ರವೆಂಬ ಇಂದ್ರಜಾಲದ ಹಿಂದಿರುವ ನಿಯಮಗಳನ್ನು ನಿಮಗೆ ಅರಿವಿಲ್ಲದಂತೆಯೇ ನೋಡಿದ್ದೀರಿ.

ನೀವುಗಳು ಬೆಂಕಿ, ಲಾಂದ್ರ ಅಥವಾ ದೀಪದ ಮುಂದೆ ಕುಳಿತು ಕೈಗಳನ್ನು ಎತ್ತಿ ಹಿಡಿದು ಬೆರಳುಗಳನ್ನು ತಗ್ಗಿಸಿ, ಬಗ್ಗಿಸಿ, ಬಗೆಬಗೆಯ ಆಕಾರದ ನೆರಳನ್ನು

ಗೋಡೆಯ ಮೇಲೆ ಬೀಳಿಸುವುದಿಲ್ಲವೇ? ಜಿಂಕೆ, ಗಿಣಿ, ಬೆಕ್ಕು, ಹೀಗೆ ನಾನಾ ರೀತಿಯ ಆಕಾರಗಳು. ನಿಮ್ಮ ಕೈಗಳನ್ನು ದೀಪದ ಸಮೀಪಕ್ಕೆ ಒಯ್ದಷ್ಟೂ ನೆರಳು ದೊಡ್ಡದಾಗುತ್ತಾ ಹೋಗುತ್ತದೆ. ನೀವು ನಂಬದೇ ಇರಬಹುದು, ಆದರೆ ಈ ಮಕ್ಕಳ ನೆರಳಿನಾಟವೇ ಸಿನೆಮಾ ಕೈಗಾರಿಕೆಯ ಆರಂಭ.

ನಿಮ್ಮ ಚಿಕ್ಕ ತಮ್ಮನೋ ತಂಗಿಯೋ ಬಣ್ಣದ ಪೆನ್ಸಿಲ್ಲುಗಳಿಂದ ಚಿತ್ರ ವಿಚಿತ್ರವಾದ ಮನೆ, ಬೆಕ್ಕು, ಮರಗಳನ್ನು ಬರೆಯುವುದನ್ನು ನೀವು ನೋಡಿದ್ದೀರಿ. ಪ್ರಪಂಚದ ಪ್ರಸಿದ್ಧ ನಗೆ ಚಲನಚಿತ್ರಕಾರನೂ 'ಮಿಕ್ಕಿ ಮೌಸ್'ನ ಸೃಷ್ಟಿಕರ್ತನೂ ಆದ ವಾಲ್ಟ್ ಡಿಸ್ನೆ ವಿಶ್ವದ ಲಕ್ಷೋಪಲಕ್ಷ ಮಕ್ಕಳನ್ನು ಸಂತೋಷಪಡಿಸಲು ಏನು ಮಾಡಿದನೋ ಅದನ್ನೇ ನಿಮ್ಮ ಪುಟ್ಟ ತಮ್ಮನೂ ಮಾಡುತ್ತಿರುವುದು.

ನಿಮ್ಮ ಶಾಲೆಯ ನಾಟಕಗಳಲ್ಲಿ ನೀವು ಪಾತ್ರವಹಿಸಿದ್ದೀರಾ? ಆ ವೇದಿಕೆಯನ್ನೇ ನಟನಟಿಯರು ತಮ್ಮ ಪಾತ್ರಗಳನ್ನು ನಿರ್ವಹಿಸಲು ಬಳಸುವ ಚಲನಚಿತ್ರಗಳ ಸ್ಟುಡಿಯೋ ಎಂದು ಕಲ್ಪನೆ ಮಾಡಿಕೊಳ್ಳಿ.

ನಿಮ್ಮ ಬಳಿ ಅಥವಾ ನಿಮ್ಮ ಸ್ನೇಹಿತರ ಬಳಿ ಒಂದು ಬಾಕ್ಸ್ ಕ್ಯಾಮರಾ ಇದೆಯಾ? ಅಥವಾ ನೀವು ನಿಮ್ಮ ಸ್ನೇಹಿತನ ಚಿತ್ರವನ್ನು ಈ ಕ್ಯಾಮರಾದಿಂದ ತೆಗೆದಿದ್ದೀರಾ? ಕ್ಯಾಮರಾ ಮುಂದೆ ನಿಂತಾಗ ಚೆನ್ನಾಗಿ ಕಾಣಿಸಬೇಕೆಂದು ನೀವು ಯತ್ನಿಸುತ್ತೀರಿ. ತಲೆಯನ್ನು ಆ ಕಡೆ ಈ ಕಡೆ ಬಗ್ಗಿಸಿ ನಿಮಗೆ ಇಷ್ಟವಾದ ನಟನಟಿಯರು ಚಲನಚಿತ್ರಕ್ಕಾಗಿ ಕ್ಯಾಮರಾ ಮುಂದೆ ನಿಂತು ನಟಿಸುವಂತೆ ನಟಿಸುತ್ತೀರಲ್ಲವೇ? ಮುಖದ ಮೇಲೆ ಸರಿಯಾದ ಬೆಳಕು ಬೀಳಿಸಲು ತಲೆ ಮೇಲೆತ್ತು, ಬಗ್ಗಿಸು ಎಂದು ಹೇಳುವ ಬಾಕ್ಸ್ ಕ್ಯಾಮರಾ ಹಿಡಿದು ನಿಂತ ಆ ಹುಡುಗ ಚಲನಚಿತ್ರ ನಿರ್ದೇಶಕ ಅಥವಾ ಛಾಯಾಗ್ರಾಹಕನ (ಕ್ಯಾಮರಾಮ್ಯಾನ್) ಹಾಗೇ ನಟಿಸುತ್ತಾನೆ.

ನೀವೆಲ್ಲಾ 'ಕಾಮಿಕ್ಸ್' ಓದುತ್ತೀರಲ್ಲಾ? ಹದಿನಾರು, ಇಪ್ಪತ್ತು ಅಥವಾ ಇಪ್ಪತ್ತುನಾಲ್ಕು ಚಿತ್ರಗಳ ಮೂಲಕ ಕಥೆ ಹೇಳುವಂಥಾ ಕಾಮಿಕ್ಸ್? ಅದೇ ರೀತಿ ಚಲನಚಿತ್ರ ಕಥೆಯನ್ನೂ ಸಹ ಸನ್ನಿವೇಶಗಳು (ಸೀಕ್ವೆನ್ಸ್), ದೃಶ್ಯಗಳು (ಸೀನ್ಸ್), ದೃಶ್ಯಗ್ರಹಣ (ಷಾಟ್ಸ್) ಮತ್ತು ಬಿಡಿ ಚಿತ್ರಗಳು (ಫ್ರೇಮ್ಸ್) ಎಂದು ವಿಭಾಗಿಸಿದ್ದಾರೆ. ಒಂದು ಕಾಮಿಕ್ಸ್ ಪುಸ್ತಕದ ಬೆಲೆ ಒಂದು ರೂಪಾಯಿ ಆದರೆ ಒಂದು ಚಲನಚಿತ್ರದ ಬೆಲೆ ಹತ್ತು ಲಕ್ಷಕ್ಕೂ ಮೀರಿ ಆಗುತ್ತದೆ. ಆದರೆ ನಿಯಮಗಳೆಲ್ಲಾ ಒಂದೇ.

ಎಲ್ಲಾ ಚಿತ್ರಗಳೂ ಒಂದೇ ರೀತಿಯದ್ದಾಗಿ ಕಾಣುವ 'ಪಿಕ್ಚರ್ ಬುಕ್'ನ್ನು ನೀವು ನೋಡಿದ್ದೀರಾ? ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಮಾತ್ರ ಒಂದು ಚಿತ್ರಕ್ಕೂ ಮತ್ತೊಂದು ಚಿತ್ರಕ್ಕೂ ಬಹಳ ಸ್ವಲ್ಪ ವ್ಯತ್ಯಾಸವಿರುವುದು ಗೊತ್ತಾಗುತ್ತದೆ. ಕೈಯೋ ಕಾಲೋ ಕೊಂಚ ಮುಂದೆ ಇರುತ್ತದೆ. ಮುಂದಿನ ಚಿತ್ರದಲ್ಲಿ ಇನ್ನೂ ಸ್ವಲ್ಪ ಮುಂದೆ, ಹಾಗೆ ಮುಂದುವರೆಯುತ್ತದೆ. ಚಿತ್ರದ ಹಾಳೆಗಳನ್ನು ವೇಗವಾಗಿ ತಿರುವಿಹಾಕಿದಾಗ ಚಿತ್ರಗಳಿಗೆಲ್ಲಾ ಜೀವ ಬಂದಂತೆನಿಸುತ್ತದೆ. ಆಗ ಅದು ಒಂದೇ ಕ್ರಮವಾದ ಚಿತ್ರಗಳು ಎನಿಸದೆ ಚಲಿಸುವ ಚಿತ್ರಗಳಾಗಿ ಗೋಚರಿಸುತ್ತವೆ.

ನಿಯಮದಂತೆ ಹೇಳುವುದಾದರೆ ನಿಮ್ಮ ಕೈ ಚಲನಚಿತ್ರದ ಪ್ರೊಜೆಕ್ಟರ್ ಮಾಡುವ ಕೆಲಸವನ್ನೇ ಮಾಡುತ್ತದೆ. ಈ ಪ್ರೊಜೆಕ್ಟರ್ ಸೆಕೆಂಡಿಗೆ 24 'ಫ್ರೇಮ್'ಗಳಂತೆ ಒಂದೇ ವೇಗದಲ್ಲಿ ಚಿತ್ರಗಳನ್ನು ರಜತ ಪರದೆಯ ಮೇಲೆ ಪ್ರತಿಬಿಂಬಿಸುತ್ತದೆ. ಇದರಿಂದಾಗಿ ಚಿತ್ರಗಳಲ್ಲಿನ ಪಾತ್ರಗಳು ಚಲಿಸುತ್ತಿರುವಂತೆ ಭಾಸವಾಗುತ್ತದೆ.

ಚಲನಚಿತ್ರದ ಕ್ಯಾಮರಾ ಕೂಡ ನಿಮ್ಮ ಬಾಕ್ಸ್ ಕ್ಯಾಮರಾದಂತೆ, ಹೆಚ್ಚು ವ್ಯತ್ಯಾಸ ಇಲ್ಲದ ಸಾಧಾರಣವಾದ ಕ್ಯಾಮರಾ. ಅದು ಒಂದೇ ಸಮನಾಗಿ ಒಂದು ಸೆಕೆಂಡಿಗೆ ಇಪ್ಪತ್ತ ನಾಲ್ಕು ಚಿತ್ರಗಳನ್ನು ತೆಗೆಯುತ್ತದೆ. ಹೀಗೆ ಒಂದು ಫ್ರೇಮ್ ತೆಗೆದೊಡನೆ ಸುರುಳಿಯಾಗಿ ಸುತ್ತಿಕೊಂಡಿರುವ ಉದ್ದನೆಯ ಫಿಲ್ಮ್ ತನ್ನಷ್ಟಕ್ಕೆ ತಾನೇ ಬಿಡಿಸಿಕೊಂಡು ಮುಂದಿನ ಫ್ರೇಮ್ ತೆಗೆಯಲು ಸಿದ್ಧವಾಗುತ್ತದೆ.

ಒಂದು ಜೀಪ್‌ನಿಂದ ಚಿತ್ರೀಕರಣ



ಈ ರೀತಿಯಾಗಿ ಪೂರ್ಣ ಫಿಲ್ಮ್ ಸಿದ್ಧಗೊಳ್ಳುತ್ತದೆ. ನಂತರ ಈ ಉದ್ದನೆಯ ಫಿಲ್ಮ್‌ನ್ನು ಪ್ರೊಜೆಕ್ಟರ್‌ನ ಮೂಲಕ ಚಿತ್ರಗಳನ್ನು ತೆಗೆದ ವೇಗದಲ್ಲೇ — ಅಂದರೆ ಸೆಕೆಂಡಿಗೆ 24 ಫ್ರೇಮ್‌ಗಳಂತೆ — ಪರದೆಯ ಮೇಲೆ ಪ್ರತಿಬಿಂಬಿಸಲಾಗುತ್ತದೆ. ಪ್ರಬಲವಾದ ಬೆಳಕಿನ ಕಿರಣದ ಮುಂದೆ ಪ್ರತಿಯೊಂದು ಫ್ರೇಮ್ ಕ್ಷಣಮಾತ್ರ ನಿಂತು ಮುಂದೆ ಹೋಗುತ್ತದೆ. ಫ್ರೇಮ್ ಮುಂದಿರುವಾಗ ಪ್ರೊಜೆಕ್ಟರಿನ ಬಾಗಿಲು (ಷಟರ್) ತೆಗೆದು ಕೊಳ್ಳುತ್ತದೆ. ಅದು ಹೋದೊಡನೆ ಮುಚ್ಚಿಕೊಂಡು ಮುಂದಿನ ಫ್ರೇಮ್ ಬಂದೊಡನೆ ತೆಗೆದುಕೊಳ್ಳುತ್ತದೆ. ಆದರೆ ಇದೆಲ್ಲಾ ಬಹು ವೇಗದಲ್ಲಿ ನಡೆಯುತ್ತದೆ. ಪ್ರೊಜೆಕ್ಟರ್ ಕಡೆ ನೋಡಿದಲ್ಲಿ ಹೊಲಿಗೆ ಯಂತ್ರದ ಸೂಜಿಯಲ್ಲಿ ದಾರ ವೇಗವಾಗಿ ಹೋಗುವಂತೆ ಒಂದೇ ಸಮನೆ ಫಿಲ್ಮ್ ಹೋಗುತ್ತಿರುವಂತೆ ನಮಗೆ ತೋರುತ್ತದೆ.

ಕ್ಯಾಮರಾದಿಂದ ಯಾವ ವೇಗದಲ್ಲಿ ಚಿತ್ರಗಳನ್ನು ತೆಗೆಯಲಾಗುತ್ತದೋ ಅದೇ ವೇಗದಲ್ಲಿ ಚಿತ್ರಗಳು ಪ್ರೊಜೆಕ್ಟರ್ ಮೂಲಕ ಒಂದಾದರ ಮೇಲೆ ಒಂದರಂತೆ ಬರುತ್ತವೆ, ಹೋಗುತ್ತವೆ. ಹೀಗಾಗಿ ಚಿತ್ರಗಳು ಸ್ಥಿರಚಿತ್ರವಾಗದೆ ಚಲಿಸುವ ಚಿತ್ರ ಗಳಾಗುತ್ತವೆ. 'ಪಿಕ್ಚರ್ ಪುಸ್ತಕ'ವನ್ನು ವೇಗವಾಗಿ ತಿರುವಿ ಹಾಕಿದಾಗ ಚಲಿಸುವಂತೆ ಕಾಣುವ ನಿಯಮವನ್ನೇ ಇಲ್ಲೂ ಸಹ ಪ್ರಯೋಗಿಸಲಾಗಿದೆ.

ನಿಮ್ಮ ಮನೋರಂಜನೆಗಾಗಲೀ, ಪಾಠ ಪ್ರವಚನಕ್ಕಾಗಲೀ ನಿಮ್ಮ ಶಾಲೆಯಲ್ಲಿ ಪರದೆಯ ಮೇಲೆ ತೋರಿಸುವ ಕಥೆಗಳ ಹಾಗೆ ಚಲನಚಿತ್ರವೂ ಬಹಳ ಆಸಕ್ತಿಯುತ ವಾದುದು. ಕೊಂಚ ತೊಡರಿನ ವಿಧಾನದ್ದಾದರೂ ಇಂದ್ರಜಾಲದಂತೆ ಮರುಳುಗೊಳಿಸು ವಂಥಾದ್ದು. ಆದರೆ ಈ ಇಂದ್ರಜಾಲ ಬರೀ ವಿಜ್ಞಾನವಷ್ಟೇ. ರಸಾಯನ ಶಾಸ್ತ್ರ ಮತ್ತು ಭೌತಶಾಸ್ತ್ರಗಳ ನಿಯಮಗಳನ್ನು ಹಳೇಕಾಲದ ನಾಟಕ ಮತ್ತು ಕಥೆ ಹೇಳುವ ಕಲೆಯ ಮೇಲೆ ಪ್ರಯೋಗಿಸಲಾಗಿದೆ. ಚಲನಚಿತ್ರ ತಯಾರಾಗುವುದು ಹೇಗೆಂದು ತಿಳಿದುಕೊಂಡರೆ ಅದನ್ನು ನೋಡುವಾಗ ನಿಮಗಾಗುವ ಆನಂದ, ಅನುಭವ ಇನ್ನೂ ಅಧಿಕವಾಗುತ್ತದೆ.

ಆದರೆ ಚಲನಚಿತ್ರ ಆರಂಭಿಸುವ ಮೊದಲು ಚಿತ್ರಕಥೆ (ಸ್ಕ್ರಿಪ್ಟ್) ತಯಾರಾಗ ಬೇಕು. ಇದನ್ನು ಬರೆಯುವ ಮೊದಲು ಚಿತ್ರಕಥೆ ಲೇಖಕರು (ಸ್ಕ್ರಿಪ್ಟ್ ರೈಟರ್) ಮತ್ತು ನಿರ್ದೇಶಕರು (ಡೈರೆಕ್ಟರ್) ಇಬ್ಬರೂ ಸೇರಿ ಚೆನ್ನಾಗಿ ಯೋಚಿಸಬೇಕು.

ಚಲನಚಿತ್ರವೆಂದರೆ ಬರೀ ಯಂತ್ರಗಳ ಕೆಲಸವೇನೋ ನಿಜ. ಆದರೆ ಆ ಯಂತ್ರಗಳು ಕೆಲಸ ಮಾಡುವುದು ಮನುಷ್ಯನ ಬುದ್ಧಿಶಕ್ತಿಯಿಂದ.

# ಒಂದಾನೊಂದು ಕಾಲದಲ್ಲಿ

"ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ರಾಜನಿದ್ದ..."

ಈ ರೀತಿ ಶುರುವಾಗುವ ಕಥೆಗಳನ್ನು ನೀವು ನಿಮ್ಮ ಅಜ್ಜಿಯ ಬಾಯಿಯಿಂದಲೋ ಅತ್ತೆಯವರ ಬಾಯಿಯಿಂದಲೋ ಕೇಳಿರಬೇಕಲ್ಲವೇ?

ರಾಜನಿಗೆ ಏಳು ಜನ ಸುಂದರಿಯಾದ ಹೆಣ್ಣು ಮಕ್ಕಳೂ ಒಬ್ಬ ಗಂಡು ಮಗನೂ ಇದ್ದರು. ಸಾಹಸವಂತನಾದ ರಾಜಕುಮಾರ ಕಪ್ಪು ರಾಕ್ಷಸನ ಬಂಧನದಲ್ಲಿರುವ ಗಂಧರ್ವ ರಾಜಕುಮಾರಿಯನ್ನು ಬಿಡಿಸಲು ಬಿಳಿ ಕುದುರೆಯನ್ನೇರಿ ಕಾಡಿನಲ್ಲಿ ಓಡುತ್ತಿದ್ದ...

ರಾಜರು, ರಾಜಕುಮಾರಿಯರ ಕಥೆಗಳು, ಹಾರಾಡುವ ಜಮಖಾನೆ, ರೆಕ್ಕೆಯಿರುವ ಕುದುರೆಯ ಕಥೆಗಳು, ಕೆಲವು ಸಲ ಸಾಮಾನ್ಯ ಸ್ತ್ರೀ-ಪುರುಷರ, ಬಾಲಕ ಬಾಲಕಿಯರ ಕಥೆಗಳು, ಹೀಗೆ ಅನೇಕ ಕಥೆಗಳು.

ಇವಷ್ಟೇ ಅಲ್ಲದೆ ನಿಮ್ಮ ಪಠ್ಯ ಪುಸ್ತಕದಲ್ಲಿನ ಕಥೆಗಳನ್ನು ಮತ್ತು ಕಥೆ ಪುಸ್ತಕ, ಕಾದಂಬರಿಗಳನ್ನು ಓದಿದ್ದೀರಿ. ಕಥೆಗಳನ್ನು ನಾಟಕವಾಗಿ ಆಡಿರುವುದನ್ನು ನೋಡಿದ್ದೀರಿ.

ಹೀಗೆಯೇ ಕಥೆಗಳನ್ನು ಸಾವಿರಾರು ಜನರಿಗೆ ಒಂದೇ ಸಮಯದಲ್ಲಿ ಹೇಳುವುದೇ ಚಲನಚಿತ್ರ.

ಆದರೆ ಮೊಟ್ಟಮೊದಲು ಯಾರಾದರೊಬ್ಬರು ಕಥೆ ಯೋಚಿಸಿ ರೂಪಿಸಬೇಕು.

ಅವರನ್ನು ಕಥೆ ಬರೆಯುವವರೆಂದು (ಸ್ಟೋರಿ ರೈಟರ್) ಕರೆಯುತ್ತೇವೆ. ಅವರು ಕಥೆಯನ್ನು ಬರೆಯಬಹುದು ಅಥವಾ ಅದರ ಬಗ್ಗೆ ಯೋಚಿಸಬಹುದು. ಈ ಕಥೆ ಚಲನಚಿತ್ರಕ್ಕಾಗಿಯೇ ಬರೆದಿರುವಂಥದ್ದಾಗಿರಬಹುದು ಅಥವಾ ಬೇರೆ ಯಾರೋ ಬರೆದು ಪ್ರಕಟಿಸಿರುವ ಕಥೆ ಅಥವಾ ಕಾದಂಬರಿಯಾಗಿರಬಹುದು. ಅದೂ ಇಲ್ಲದಿದ್ದರೆ ಯಾವುದಾದರೂ ನಾಟಕದಿಂದ ತೆಗೆದುಕೊಂಡಿರಬಹುದು ಅಥವಾ ವಿದೇಶೀ ಭಾಷೆಯ ಚಲನಚಿತ್ರದಿಂದ ಕದ್ದಿರಲೂಬಹುದು.

ಕಥೆಯನ್ನು ಅಥವಾ ಕಥೆಯ ಒಂದು ಕಲ್ಪನೆಯನ್ನು ನಿರ್ಮಾಪಕ ಅಥವಾ

ನಿರ್ದೇಶಕ ತಾರಾಗಣದೊಂದಿಗೆ ಚಿತ್ರಕಥೆಯನ್ನು ಚರ್ಚಿಸುತ್ತಿರುವುದು



ನಿರ್ದೇಶಕರಿಗೆ ಒಪ್ಪಿಸಿದ ನಂತರ ಅದರ ಸಾಧ್ಯಾಸಾಧ್ಯತೆಗಳನ್ನು ಕುರಿತು ಚರ್ಚಿಸುತ್ತಾರೆ - ಮುಖ್ಯವಾಗಿ ಇದು ಸಾವಿರಾರು ಚಿತ್ರಪ್ರೇಮಿಗಳಿಗೆ ರುಚಿಸುವ ಬಗ್ಗೆ. ಕಥೆ ಒಪ್ಪಿಗೆಯಾದ ನಂತರ ಅದನ್ನು ಚಿತ್ರಕಥೆ ಲೇಖಕರಿಗೆ (ಸ್ಕ್ರೀನ್ ಪ್ಲೇ ರೈಟರ್) ಕೊಡುತ್ತಾರೆ. ಅವನು ಸ್ವತಃ ನಿರ್ದೇಶಕನೇ ಆಗಿರಬಹುದು ಅಥವಾ ಅನುಭವವುಳ್ಳ ಚಿತ್ರಕಥಾ ಲೇಖಕನಾಗಿರಬಹುದು.

ಅವನು ಅದನ್ನು ವಿಸ್ತರಿಸಿ, ಪರದೆಯ ಮೇಲೆ ರಸಿಕರಿಗೆ ತೋರಿಸಬೇಕಾದ ರೀತಿಯನ್ನು ಮನಸ್ಸಿನಲ್ಲೇ ಚಿತ್ರಿಸಿಕೊಂಡು ಸನ್ನಿವೇಶ ಮತ್ತು ದೃಶ್ಯಗಳಲ್ಲಿ ವಿಭಾಜಿಸುತ್ತಾನೆ. ನಂತರ ನಿರ್ದೇಶಕರೊಡನೆ ಚರ್ಚಿಸಿ ಚಿತ್ರಕಥೆ ಬರೆಯಲು ತೊಡಗುತ್ತಾನೆ.

ಚಿತ್ರಕಥೆ ಒಂದು ರೀತಿಯಲ್ಲಿ ನಾಟಕವಿದ್ದ ಹಾಗೇ. ಆದರೆ ಪರದೆ ಮೇಲಿನ ಅವಶ್ಯಕತೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನು ಬರೆಯಲಾಗುತ್ತದೆ. ದೃಶ್ಯಗಳು ಯಾವ ಸನ್ನಿವೇಶಕ್ಕೆ ಸೇರಿದ್ದು, ಯಾವ ದೃಶ್ಯದಲ್ಲಿ ಯಾವ ಪಾತ್ರಗಳು ಬರಬೇಕು, ಅವರ ಪಾತ್ರಗಳೇನು ಎಂಬುದನ್ನು ವಿಶದವಾಗಿ ಬರೆಯುತ್ತಾರೆ.

ನಿರ್ಮಾಪಕ / ನಿರ್ದೇಶಕರುಗಳಿಂದ ಚಿತ್ರಕಥೆ ಒಪ್ಪಿಗೆ ಪಡೆದ ನಂತರ ಅದು ಸಂಭಾಷಣೆ ಬರೆಯುವವರ ಕೈಗೆ ಹೋಗುತ್ತದೆ.

ಬೇರೆ ದೇಶಗಳಲ್ಲಿ ಚಿತ್ರಕಥೆಯ ಜೊತೆಯಲ್ಲೇ ಸಂಭಾಷಣೆಗಳನ್ನೂ ಬರೆಯಲಾಗುತ್ತದೆ. ಆದರೆ ಭಾರತದಲ್ಲಿ ಈ ಎರಡನ್ನೂ ಬೇರೆ ಬೇರೆಯವರೇ ಬರೆಯುತ್ತಾರೆ. ಚಲನಚಿತ್ರ ಹಿಂದೀ ಭಾಷೆಯದ್ದಾಗಿರಬಹುದು. ಆದರೆ ಚಿತ್ರಕಥೆ ಬರೆಯುವವರು ಹಿಂದೀ ಭಾಷಿಯಲ್ಲದಿರಬಹುದು. ನಮ್ಮ ದೇಶದಲ್ಲಿ ಸಾಧಾರಣ ವಾಗಿ ಚಿತ್ರಕಥೆಯನ್ನು ಎಲ್ಲರಿಗೂ ಅರ್ಥವಾಗುವಂತೆ ಇಂಗ್ಲೀಷಿನಲ್ಲೇ ಬರೆಯ ಲಾಗುತ್ತದೆ. ಇದಕ್ಕೆ ಕಾರಣ ವಿವಿಧ ಭಾಷೆಗಳ ಜನರ ಮಿಲನ. ಉದಾಹರಣೆಗೆ ಪಂಜಾಬಿ ನಿರ್ಮಾಪಕ, ತಮಿಳಿನ ನಿರ್ದೇಶಕ, ಬೆಂಗಾಲಿ ಕ್ಯಾಮರಾಮ್ಯಾನ್, ಕನ್ನಡದ ಧ್ವನಿಗ್ರಾಹಕ, ಪಂಜಾಬ್ ಅಥವಾ ಉತ್ತರ ಪ್ರದೇಶದ ನಾಯಕ, ತೆಲುಗು ನಾಯಕಿ, ಇತ್ಯಾದಿ.

ಭಾರತದಲ್ಲಿ ನಿರ್ಮಾಣವಾದ ಮೊದಲ ವಾಕ್ಚಿತ್ರಗಳು ಪ್ರಸಿದ್ಧವಾದ ನಾಟಕಗಳೇ ಆಗಿದ್ದವು. ಆಗಿನಿಂದ ಸಂಭಾಷಣೆ ಬರೆಯುವವನಿಗೆ (ಮುಖ್ಯವಾಗಿ ಹಿಂದೀ ಚಿತ್ರ ಗಳಲ್ಲಿ) ಮುಖ್ಯ ಪಾತ್ರವಿದೆ. ಪೌರಾಣಿಕ ಚಿತ್ರಗಳಿಗೆ ಸಂಸ್ಕೃತ ಮಿಶ್ರಿತ ಹಿಂದೀಯನ್ನೂ ಮೊಗಲ್ ಕಾಲದ ಐತಿಹಾಸಿಕ ಹಾಗೂ ಮುಸ್ಲಿಂ ಸಾಮಾಜಿಕ ಚಿತ್ರಗಳಿಗೆ ಪರ್ಷಿಯನ್



ಪೌರಾಣಿಕ ಚಿತ್ರವೊಂದರ ದೃಶ್ಯ

ಹಾಗೂ ಉರ್ದು ಭಾಷೆಗಳಿಂದ ಪ್ರಭಾವಿತವಾದ ಹಿಂದೀ ಭಾಷೆಯನ್ನೂ ಬಳಸುತ್ತಾರೆ. ಸಾಧಾರಣ ಚಿತ್ರ ಪ್ರೇಮಿಗಳಿಗೆ ಸಾಹಿತ್ಯದ ಸಂಪರ್ಕವೆಂದರೆ ಚಿತ್ರಗಳಲ್ಲಿನ ಸಂಭಾಷಣೆ. ಸಂಭಾಷಣೆಯನ್ನು ಬರೆಯುವವನು ಭಾಷೆಯ ಸೌಂದರ್ಯವನ್ನೂ ಶಕ್ತಿಯನ್ನೂ ಉಳಿಸಿಕೊಂಡು ಜನತೆಯ ಮನಸ್ಸಿಗೆ ಹಿಡಿಸುವಂತೆ ಬರೆಯುತ್ತಾನೆ.

ಕೆಲವು ಸಲ ನಿರ್ಮಾಪಕನೇ ನಿರ್ದೇಶಕನೂ ಆಗಿರಬಹುದು. ಕಥೆ ಬರೆಯುವನ್ನು ಸಂಭಾಷಣೆಗಳನ್ನೂ ಬರೆಯಬಹುದು. ಆದರೆ ಚಲನಚಿತ್ರ ತಯಾರಿಕೆಯಲ್ಲಿ ಬೇರೆ ಬೇರೆ ಕೆಲಸಗಳಿಗಿರುವ ಪ್ರಾಮುಖ್ಯತೆ ನಿಮಗೆ ಸುಲಭವಾಗಿ ಅರ್ಥವಾಗಲೆಂದು ಇವುಗಳನ್ನು ಇಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ವಿವರಿಸಿದ್ದೇನೆ.

ನಮ್ಮ ಚಿತ್ರಗಳಲ್ಲಿ ಹಾಡುಗಳಿಗೂ ಬಹಳ ಪ್ರಾಮುಖ್ಯತೆ ಇರುವುದರಿಂದ ಹಾಡುಗಳನ್ನು ಬರೆಯುವವರೂ ಸಂಗೀತ ನಿರ್ದೇಶಕರೂ ಬಹಳ ಮುಖ್ಯವಾದ

ಪಾತ್ರ ವಹಿಸುತ್ತಾರೆ. ಹಾಡು ಮತ್ತು ನೃತ್ಯಗಳ ದೃಶ್ಯಗಳನ್ನು ಚಿತ್ರೀಕರಿಸುವ ಮೊದಲೇ ಅವರು ಹಾಡನ್ನೂ, ರಾಗಗಳನ್ನೂ, ಹಿನ್ನೆಲೆ ಸಂಗೀತವನ್ನೂ ರಚಿಸಬೇಕಾಗುತ್ತದೆ.

ಇಷ್ಟೆಲ್ಲಾ ತಯಾರಾದ ನಂತರವೇ ನಿರ್ಮಾಪಕರು ದೃಶ್ಯಗಳನ್ನು ತೆಗೆಯಲು ಸಿದ್ಧರಾಗುತ್ತಾರೆ. ಒಳಾಂಗಣದ ಚಿತ್ರೀಕರಣ ಸ್ಟೂಡಿಯೋವಿನಲ್ಲಿ ಅಥವಾ ಯಾವುದಾದರೂ ಮನೆಯಲ್ಲಿ ನಡೆಯುತ್ತದೆ. ಹೊರಾಂಗಣ ಚಿತ್ರೀಕರಣಕ್ಕೂ ಅಗತ್ಯವಾದ ಪ್ರದೇಶಗಳನ್ನು ಆರಿಸಿಕೊಳ್ಳಲಾಗುವುದು. ನಾವೀಗ ಒಂದು ಸ್ಟೂಡಿಯೋಗೂ ಮತ್ತು ಒಂದು ಹೊರಾಂಗಣಕ್ಕೂ ಹೋಗಿ ಸಮೀಪದಿಂದ ಚಿತ್ರೀಕರಣ ಹೇಗೆ ಮಾಡುತ್ತಾರೆ ಎಂಬುದನ್ನು ನೋಡೋಣ.



# ಅಲ್ಲಾವುದ್ದೀನನ ಅದ್ಭುತ ದೀಪ

ಸಾಕಷ್ಟು ಕಾವಲಿರುವ ಗೇಟುಗಳನ್ನು ದಾಟಿ ಸ್ಟೂಡಿಯೋ ಒಳಕ್ಕೆ ಹೋದಂತೆ ಕಾಣಿಸುವುದೇನು? ಬರೀ ಗಡಿಬಿಡಿ.

ವಿವಿಧ ವೇಷಗಳ ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಗಂಡಸರೂ ಹೆಂಗಸರೂ ಅಡಾವುಡಿಯಲ್ಲಿರುತ್ತಾರೆ — ಕೊರವಂಜಿಯಂತೆ, ಸರ್ಕಸ್‌ನ ಹಾಸ್ಯಗಾರರಂತೆ, ಪೋಲೀಸ್ ಪ್ಯಾದೆ ಅಥವಾ ಅಧಿಕಾರಿ, ಕಪ್ಪು ಕೋಟು ಧರಿಸಿದ ವಕೀಲರಂತೆ, ಬಣ್ಣಬಣ್ಣದ ಲಂಗಗಳನ್ನು ಧರಿಸಿರುವ ಕ್ಯಾಬರೆ ನರ್ತಕಿಯರು, ದಷ್ಟಪುಷ್ಟವಾಗಿ ಕಾಣುವ ಚೋರರ ಮುಖಂಡ, ಇತ್ಯಾದಿ. ಚಿಲ್ಲರೆ (ಎಕ್ಸ್‌ಟ್ರಾಸ್) ಪಾತ್ರಧಾರಿಗಳೆಂದು ತುಚ್ಛವಾಗಿ ಅನ್ನಿಸಿಕೊಂಡಿದ್ದ ಇವರು ಸಣ್ಣಸಣ್ಣ ಪಾತ್ರಗಳನ್ನು ನಿರ್ವಹಿಸಲು ಈಗ ಸಿದ್ಧರಾಗಿರುವರು. ಆದರೆ ಅವರು ನಿಜವಾಗಿ ಚಿಲ್ಲರೆ ಪಾತ್ರಧಾರಿಗಳಲ್ಲ. ಜನ ಸಮೂಹದ ದೃಶ್ಯಗಳನ್ನು ಚಿತ್ರಿಸಲು ಮತ್ತು ಅದಕ್ಕೆ ತಕ್ಕ ವಾತಾವರಣವನ್ನು ನೀಡಲು ಇವರುಗಳು ಅತ್ಯವಶ್ಯಕ. ಇವರುಗಳಿಗೆ ದಿನಕ್ಕೆ ಎಷ್ಟು ಕಡಿಮೆ ಹಣ ದೊರೆಯುತ್ತದೆ, ತಿಂಗಳಲ್ಲಿ ಎಷ್ಟು ಕಡಿಮೆ ದಿನಗಳಲ್ಲಿ ಅವರುಗಳಿಗೆ ಕೆಲಸವಿರುತ್ತದೆ ಎಂಬುದು ತಿಳಿದಲ್ಲಿ ಅವರ ಬಾಡಿದ ಮುಖಕ್ಕೆ ಕಾರಣ ನಿಮಗೆ ಅರಿವಾಗುತ್ತದೆ. ಆದರೂ ಸಹ ಅವರು ಹೇಳಿದಂತೆ ಹಾಡಿ, ಕುಣಿದು, ನಗುತ್ತಾರೆಂಬುದು ಸೋಜಿಗದ ವಿಷಯ.



ಅಸನಿ ಸಂಕೇತ್ ಚಿತ್ರದ ಒಂದು ದೃಶ್ಯ — ಪಾಳು ಬಿದ್ದ ಹಳ್ಳಿ

ಇವರುಗಳೇ ಅಲ್ಲದೇ ಕ್ಯಾಮರಾಗಳನ್ನು ಹೊರುವವರು, ಭಾರವಾದ ದೀಪಗಳನ್ನು ಎತ್ತಿ ಇಡುವವರು, ಟ್ರಾಲಿಗಳನ್ನು ತಳ್ಳುವವರು, ದೊಡ್ಡ ದೊಡ್ಡ ಮರದ ಹಲಗೆಗಳ ಮೇಲೆ ಚಿತ್ರಿಸಿದ ದೃಶ್ಯ (ಸೀನರಿ)ಗಳನ್ನು ತಳ್ಳುವವರು ಅಥವಾ ಲಾರಿಗಳಿಂದ ಪೀಠೋಪಕರಣಗಳನ್ನು ಇಳಿಸುವವರು ಇರುತ್ತಾರೆ. ಇವರುಗಳ ಮಧ್ಯೆ ಯಾವಾಗಲಾದರೊಮ್ಮೆ ನಿಮ್ಮ ಪ್ರಿಯ ನಾಯಕ ತನ್ನ ಬಣ್ಣ ಸಜ್ಜಿಕೆ ಕೊಠಡಿ (ಮೇಕಪ್ ರೂಮ್) ಯಿಂದ ಚಿತ್ರೀಕರಣ ಜಾಗಕ್ಕೆ (ಸ್ಟುಡಿಯೋ ಫ್ಲೋರ್) ಹೋಗುತ್ತಿರುವುದನ್ನು ಕಾಣಬಹುದು. ಬನ್ನಿ ನಾವೂ ಅವನನ್ನು ಹಿಂಬಾಲಿಸೋಣ.

ಅಲ್ಲಾವುದ್ದೀನನ ಅದ್ಭುತ ದೀಪದ ಕಥೆಯನ್ನು ನೀವು ಓದಿರಲೇಬೇಕು. ಅಲ್ಲಾವುದ್ದೀನ್ ಹಿತ್ತಾಳೆ ದೀಪದ ಕುಂಭವನ್ನು ಉಜ್ಜುತ್ತಿದ್ದಂತೆಯೇ ದೀಪದ ಭೂತ ಅಪ್ಪಣೆಗಾಗಿ ಕಾದು ನಿಂತಿತು.

"ಒಂದರಮನೆ ಕಟ್ಟು" ಅಲ್ಲಾವುದ್ದೀನ್ ಆಜ್ಞೆ ಮಾಡಿದ. ಒಂದು ಕ್ಷಣದಲ್ಲಿ ಅರಮನೆ ಪವಾಡದಂತೆ ಅವನ ಮುಂದಿತ್ತು.

ಅಲ್ಲಾವುದ್ದೀನನಿಗೆ ಅರಮನೆ ವಾಸ ಸಾಕಾದ ಕೂಡಲೇ "ತೊಗೊಂಡ್ಹೋಗು" ಎಂದ. ತಕ್ಷಣವೇ ಅಲ್ಲಿಂದ ಅರಮನೆ ಮಾಯವಾಯಿತು.

ಸ್ಟುಡಿಯೋವಿನಲ್ಲಿ ದೃಶ್ಯಗಳಿಗೆ ಅಗತ್ಯವಾದ ಹಿಂಬದಿ ಚಿತ್ರ, ಗೋಡೆ, ಬಾಗಿಲು, ಇತ್ಯಾದಿಗಳ (ಅಂದರೆ ಸ್ಟುಡಿಯೋ ಸೆಟ್‌ಗಳ) ಯೋಜನೆಯನ್ನು, ಅವುಗಳನ್ನು ಸಿದ್ಧಪಡಿಸುವ ಕಾರ್ಯದ

ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಕಲಾ ನಿರ್ದೇಶಕ (ಆರ್ಟ್ ಡೈರೆಕ್ಟರ್) ಮತ್ತು ಅವನ ಸಹಾಯಕರೂ ಹಾಗೂ ಕೆಲಸಗಾರರೂ ಅದ್ಭುತ ದೀಪದ ಭೂತ ಗಳಿದ್ದಂತೆ. ಒಂದೇ ದಿನದಲ್ಲಿ ಅರಮನೆಯನ್ನು ಕಟ್ಟಿ ಮರುದಿನವೇ ಬೇಕಾದರೆ ಬೀಳಿಸುತ್ತಾರೆ. ಒಂದೇ ರಾತ್ರಿಯಲ್ಲಿ ಸಾಹುಕಾರನ ಬಂಗಲೆಯನ್ನೋ ಬಡವನ ಗುಡಿಸಲನ್ನೋ ಕಟ್ಟಿ ಕೆಡವುತ್ತಾರೆ.

ನೀವು ಅನೇಕ ಚಿತ್ರಗಳಲ್ಲಿ ದೊಡ್ಡದೊಡ್ಡ ಕಂಭ, ಗೋಡೆಗಳಿಂದ ಕೂಡಿದ ವಿಶಾಲವಾದ ಭವನಗಳನ್ನು ನೋಡಿ ಅವುಗಳ ನಿರ್ಮಾಣಕ್ಕೆ ತಗಲುವ ಖರ್ಚು ಮತ್ತು ಸಮಯದ ಬಗ್ಗೆ ಆಶ್ಚರ್ಯಪಟ್ಟಿರಬಹುದು. ಆದರೆ ಆ ಅಮೃತಶಿಲೆಯ ಕಂಭಗಳು ಮರದ ಹಲಗೆಗಳಿಂದ ಮಾಡಿದ ಟೊಳ್ಳಾದ ಸುರುಳಿಗಳೆಂದು ನಿಮಗೆ ಈಗ ಅರ್ಥವಾಗಿರಬಹುದು. ಅಮೃತಶಿಲೆಯ ಮಾದರಿಯ ಕಾಗದವನ್ನು ಅದರ ಮೇಲೆ ಅಂಟಿಸಲಾಗುತ್ತದೆ. ಮರದ ಹಲಗೆಗಳ ಮೇಲೆ ಬಟ್ಟೆ ಅಂಟಿಸಿ ಅವುಗಳನ್ನು ಗೋಡೆಗಳನ್ನಾಗಿ ಮಾಡಿರುತ್ತಾರೆ. ಭಾರವಾದ ಬೆಲೆ ಬಾಳುವ ತೇಗದ ಮರದ ಬಾಗಿಲುಗಳಂತೆ ಕಂಡುಬರುವ ಈ ಬಾಗಿಲುಗಳು ತೆಳ್ಳನೆ ಮರದ ಹಲಗೆಗಳ ಬಾಗಿಲುಗಳು. ಒಳಗೆ ಹೋದಲ್ಲಿ ಹೊಳೆಯುತ್ತಿರುವ ಚೊಕ್ಕಟವಾಗಿರುವ ದೊಡ್ಡ ಮನುಷ್ಯರ ದಿವಾನ್ ಖಾನೆ (ಡ್ರಾಯಿಂಗ್ ರೂಮ್)ಯ ವಾತಾವರಣ. ಸುತ್ತಿ ಬಳಸಿ ಹೋಗುವ ಮೆಟ್ಟಲುಗಳು ಬಾಲ್ಕನಿಗೆ ಹೋಗುತ್ತವೆ. ನೀವಾಗಿ ನೋಡಿದರೆ ಬಾಲ್ಕನಿಯಿಂದ ಏನೂ ಕಾಣದು. ಅದರ ಹಿಂದೆ ಬರೀ ಅಟ್ಟಳಿಗೆಗಳು, ಮರದ ಏಣಿಗಳು, ಕ್ಯಾಮರಾವನ್ನು ಮೇಲೆ ಹಿಡಿಯಲು ಬಳಸುವ ಯಂತ್ರಗಳು, ಉಪಯೋ ಗಕ್ಕೆ ಬರುವ, ಬಾರದಿರುವ ಬಿಚ್ಚಿಟ್ಟಿರುವ ಸೆಟ್ಟಿನ ಸಾಮಾನುಗಳು, ಗೋಡೆಗಳು, ಕಂಭಗಳು ಇತ್ಯಾದಿ.

ನವಿರಾದ ಪರದೆಗಳ ಹಿಂದೆ ಕಾಣುವ ಹಿತ್ತಾಳೆ ಮತ್ತು ಕೆಂಪು ಬಣ್ಣದ ಸೂರ್ಯಾಸ್ತ ಏನು ಗೊತ್ತೆ? ಬರೀ ಒಂದು ಪರದೆಯನ್ನು ಸ್ಟೂಡಿಯೋದ ಹಿಂಭಾಗದ ಗೋಡೆಗಳಿಗೆ ನೆಲದಿಂದ ಮೇಲಿನವರೆಗೂ ಎಳೆದು ಕಟ್ಟಿರುತ್ತಾರೆ.

ಸಣ್ಣ ಮತ್ತು ದೊಡ್ಡ ಲೈಟುಗಳ ಮಧ್ಯ ಇರುವ ಸೆಟ್ಟಿನ ಮೇಲೆ ಯಾವುದೋ ದೃಶ್ಯಕ್ಕಾಗಿ ನಿರತರಾದ ನಾಯಕ ನಾಯಕಿಯರು. ಆ ಗುಂಪಿನಲ್ಲಿ ನೀವು ನಿರ್ದೇಶಕ, ಮುಖ್ಯ ಕ್ಯಾಮರಾಮ್ಯಾನ್, ಅವನ ಸಹಾಯಕರು ಮತ್ತು ಧ್ವನಿ ತಂತ್ರಜ್ಞ (ಸೌಂಡ್ ಇಂಜಿನೀಯರ್) ಇವರುಗಳನ್ನು ಗುರುತಿಸಬಹುದು. ಧ್ವನಿ ತಂತ್ರಜ್ಞ ಹೊರಗಡೆ ಧ್ವನಿ ಗ್ರಹಣ ಪೀಠದಲ್ಲಿ (ರೆಕಾರ್ಡಿಂಗ್ ಬೂತ್) ಒಂದು ಧ್ವನಿಗ್ರಹಣ ಯಂತ್ರ



ತ್ರಿಚಕ್ರ ವಾಹನದ ಮೇಲೆ 'ಘಾಮ್'

(ಮೈಕ್ರೊಫ್ರೋನ್) ವನ್ನು ಹಿಡಿದು ಕುಳಿತಿರುತ್ತಾನೆ. ಈ ಯಂತ್ರವನ್ನು ಒಂದು ಉದ್ದ ವಾದ ಕೋಲಿಗೆ ಕಟ್ಟಿರುತ್ತಾರೆ. ಅದನ್ನು 'ಬೂಮ್' ಎಂದು ಕರೆಯುತ್ತಾರೆ. ಈ ಬೂಮನ್ನು ಚಲಿಸುವ ಮೂರು ಕಾಲಿನ ಒಂದು ಪೀಠಕ್ಕೆ ಜೋಡಿಸಿ ಮಾತನಾಡಲಿರುವ ನಟನಟಿಯರ ಬಳಿ ಇಟ್ಟಿರುತ್ತಾರೆ. ಆದರೆ ಇದು ಕ್ಯಾಮರಾದಿಂದ ದೂರವಿರುತ್ತದೆ.

ಈ ಬೂಮ್‌ಗಿಂತ ಮೇಲೆ, ಸೆಟ್ಟಿನ ಗೋಡೆಗಳಿಗಿಂತಲೂ ಮೇಲೆ, ಒಳಮಾಳಿಗೆ ಗಳಿಂದ ಬಲವಾದ ಹಗ್ಗಗಳಿಂದ ಇಳಿಬೀಳಲ್ಪಟ್ಟ ಮರದ ಅಟ್ಟಳಿಗೆಗಳಿರುತ್ತವೆ. ಇವುಗಳನ್ನು 'ಕ್ಯಾಟ್-ವಾಕ್ಸ್' ಎಂದು ಕರೆಯುತ್ತಾರೆ. ಇವುಗಳ ಮೇಲೆ ಬೇರೆ ಬೇರೆ ಕೋನಗಳಿಂದ ಸಂಪೂರ್ಣ ಸೆಟ್ಟಿಗೆ ಬೆಳಕು ಒದಗಿಸುವಂಥ ದೊಡ್ಡ ದೊಡ್ಡ ದೀಪಗಳನ್ನು ಜೋಡಿಸುತ್ತಾರೆ. ಅವುಗಳು ಬಳಸುವ ವಿದ್ಯುಚ್ಛಕ್ತಿಯ ಪ್ರಮಾಣ ಪ್ರಕಾರ ಲೈಟುಗಳನ್ನು ಹತ್ತು ಕಿಲೋವಾಟ್ಸ್, ಐದು ಕಿಲೋವಾಟ್ಸ್ ಮತ್ತು 'ಸೋಲಾರ್ಸ್' (ಎರಡು ಕಿ.ವಾ.) ಎಂದು ಕರೆಯುತ್ತಾರೆ. ನಟನಟಿಯರ ಮುಖದ ಮೇಲೆ ಬೆಳಕು ಬೀರಲು ನೆಲದ ಮೇಲೆ ಇಡುವ ದೀಪಗಳು ಸಾಧಾರಣವಾಗಿ ಸೋಲಾರ್ಸ್ ಅಥವಾ ಬೇಬಿಗಳು (ಒಂದು ಕಿ.ವಾ.).

ಕ್ಯಾಮರಾಮ್ಯಾನ್ ಮತ್ತು ಅವನ ಸಹಾಯಕರು ಹೇಳಿದಂತೆ ಈ ಲೈಟುಗಳನ್ನು ಸರಿಪಡಿಸಿ ಜೋಡಿಸುವುದು ದೀಪದಾಳು (ಲೈಟ್ ಕೂಲೀಸ್)ಗಳ ಕೆಲಸ. ಈ ದೀಪದಾಳುಗಳು ಪ್ರತಿನಿತ್ಯವೂ ಭಾರವಾದ ಲೈಟುಗಳನ್ನು ಹೊತ್ತು ಹಗ್ಗಗಳ ಸಹಾಯದಿಂದ ಅಟ್ಟಳಿಗೆಗಳ ಮೇಲೆ ಏರುತ್ತಾರೆ. ಹೀಗಾಗಿ ಅವರು ಹೆಜ್ಜೆಹೆಜ್ಜೆಗೂ ಅಪಾಯ ಸ್ಥಿತಿಯಲ್ಲಿರುತ್ತಾರೆ. ಆಗಾಗ್ಗೆ ಯಾರಾದರೂ ಕಾಲುಜಾರಿ ಬೀಳುವುದೂ ಉಂಟು. ಹೀಗೆ ಬಿದ್ದಾಗ ಕೆಲವು ವೇಳೆ ಅವರುಗಳ ಪ್ರಾಣ ಹೋಗುವುದೂ ಉಂಟು. ಮುಂದಿನ ಸಲ ಚಿತ್ರದಲ್ಲಿ ಪ್ರಕಾಶಮಾನವಾದ ದೃಶ್ಯವನ್ನು ನೋಡಿದಾಗ ನಿಮ್ಮ ಮನರಂಜನೆಗಾಗಿ ಪ್ರಾಣವನ್ನೇ ಮುಡುಪಾಗಿಡುವ ಈ ಬಡಜನರನ್ನು ಜ್ಞಾಪಿಸಿಕೊಳ್ಳಿ.

ಆಳುಗಳೆಂದು ಕರೆಸಿಕೊಳ್ಳುವ ಈ ಜನ ನಿರ್ವಹಿಸುವ ಕಾರ್ಯ ಬಹಳ ಮುಖ್ಯ ವಾದದ್ದು. ನಟನಟಿಯರ ಸೌಂದರ್ಯ ಮತ್ತು ಪ್ರತಿಯೊಂದು ದೃಶ್ಯದ ಬೆಳಕಿನ ಆಯೋಜನೆ ಬೇರೆಬೇರೆ ಲೈಟುಗಳನ್ನು ಸರಿಯಾಗಿ ಜೋಡಿಸುವುದರ ಮೇಲೆ ಅವಲಂಬಿಸಿರುತ್ತದೆ. ಲೈಟುಗಳನ್ನು ಮೇಲೆ ಕೆಳಗೆ ಮಾಡಿ ಸರಿಯಾಗಿ ಜೋಡಿಸುವ, ಕಡಿಮೆ ಸಂಬಳ ತೆಗೆದುಕೊಳ್ಳುವ, ನಿರ್ಲಕ್ಷಿಸಲ್ಪಟ್ಟ ಈ ನಮ್ರ ಜನಗಳ ಹೆಸರುಗಳು ಕೃತಜ್ಞತೆಯ ಸೂಚಿಯಲ್ಲೂ ಸಹ ಕಾಣಿಸುವುದಿಲ್ಲ.



ಕ್ಯಾಟ್‌ವಾಕ್ಸ್

ಡೊಂಬರಂತೆ ತಲೆ ತಿರುಗಿಸುವ ಎತ್ತರಕ್ಕೆ ಹತ್ತುವ ಈ ದೀಪದಾಳುಗಳ ಕಡೆ ಮೇಲೆ ನೋಡುತ್ತಿದ್ದಂತೆಯೇ ಕೆಳಗೆ ಸೆಟ್ಟಿನ ಮೇಲೆ ನಾಯಕ ನಾಯಕಿ ಮತ್ತು ಇತರ ನಟ ನಟಿಯರುಗಳಿಗೆ ಅಗತ್ಯವಾದ ಬಣ್ಣ ಸಜ್ಜಿಕೆ ಕೊನೆಯ ಹಂತದಲ್ಲಿರುತ್ತದೆ. ಬಣ್ಣ ಸಜ್ಜಿಕೆಯವರು (ಮೆಕಪ್ ಮೆನ್) ಮಾಡುವ ಈ ವರ್ಣಾಲಂಕಾರ ನಿಮ್ಮ ಶಾಲೆಯ ವರ್ಣಾಲಂಕಾರಕ್ಕಿಂತ ಹೆಚ್ಚು ವಿಸ್ತಾರವಾಗಿರುತ್ತದೆ. ಆದರೆ ನಿಯಮಗಳೆಲ್ಲಾ ಒಂದೇ. ಮುಖ್ಯವಾದ ವ್ಯತ್ಯಾಸವೆಂದರೆ ನಾಟಕದಲ್ಲಿನ ನಟ ನಟಿಯರು ದೃಶ್ಯ ಮುಗಿಯು ವವರೆಗೆ, ತೆರೆ ಬೀಳುವವರೆಗೆ ರಂಗದ ಮೇಲೆ ತಯಾರಾಗಿಯೇ ಇರಬೇಕಾಗುತ್ತದೆ. ಚಲನಚಿತ್ರದಲ್ಲಿ ನಟರು ಅಥವಾ ಒಬ್ಬ ನಟ 'ದೃಶ್ಯಗ್ರಹಣ' (ಷಾಟ್) ಎಂದು ಕರೆಯಲ್ಪಡುವ ಒಂದು ಸಣ್ಣ ಭಾಗಕ್ಕಾಗಿ ತಯಾರಾದರೆ ಸಾಕು. ಒಂದು ಷಾಟನ್ನೇ ಮತ್ತೆ ಮತ್ತೆ ತೆಗೆಯುತ್ತಾ ಬೆಲೆಬಾಳುವ ಫಿಲ್ಮನ್ನು ಹಾಳುಮಾಡುವ ಸಂದರ್ಭಗಳೂ ಉಂಟು.

ಈ ಇಂದ್ರಜಾಲ ಪ್ರಪಂಚದಲ್ಲಿನ ಮತ್ತೊಂದು ಮಾಯಾಜಾಲವೆಂದರೆ ಬಣ್ಣ ಸಜ್ಜಿಕೆ ಅಥವಾ ವರ್ಣಾಲಂಕಾರ. ಗುಲಾಬಿ ರಂಗು, ಪೌಡರು ಮತ್ತಿತರ ಅಲಂಕಾರಗಳಿಂದಾಗಿ ಕಪ್ಪು ಬಣ್ಣಕ್ಕಿರುವ ನಾಯಕ ನಾಯಕಿಯರೂ ಸಹ ಆಕರ್ಷಕವಾದ ಸುಂದರ ವ್ಯಕ್ತಿಗಳಾಗಿ ಪರದೆಯ ಮೇಲೆ ಕಾಣಿಸಿಕೊಳ್ಳುತ್ತಾರೆ. ನಿಜವಾಗಿ ಹೇಳುವುದಾದರೆ ಬರೀ ವರ್ಣಾಲಂಕಾರ ಮಾತ್ರವಲ್ಲದೆ ಪರಿಣಾಮಕಾರಿಯಾದ ದೀಪಗಳ ಸಂಯೋಜನೆ ಮತ್ತು ಛಾಯಾಗ್ರಹಣ (ಫೋಟೋಗ್ರಫಿ) ಕಲಾವಿದರ ಕೊರತೆಗಳನ್ನು ಮುಚ್ಚಿ ಅವರ ಸೌಂದರ್ಯವನ್ನೇ ಎತ್ತಿ ತೋರಿಸುತ್ತದೆ. ಆದ್ದರಿಂದಲೇ ಸ್ಟುಡಿಯೋ ಕೆಲಸಗಾರರ ಮೇಲೆ ನಾಯಕ ನಾಯಕಿಯರ ಸೌಂದರ್ಯ ಪರಿಣಾಮ ಬೀರುವುದಿಲ್ಲ. ಆ ಸೌಂದರ್ಯಕ್ಕೆ ತಾವೇ ಕಾರಣರೆಂದು ಅವರಿಗೆ ಚೆನ್ನಾಗಿ ಗೊತ್ತು. ನೀವು ಸ್ಟುಡಿಯೋ ಬಿಟ್ಟು ಹೊರಗೆ ಹೋಗುವಾಗ ನಿಮ್ಮ ಮೆಚ್ಚಿನ ನಟ ನಟಿಯರು

ಮೇಕಪ್‌ನ ಮಂತ್ರ



ಒಂದೇ ದೃಶ್ಯದ ಚಿತ್ರೀಕರಣಕ್ಕಾಗಿ ಕಣ್ಣುಕ್ಕೋರೈಸುವ ದೀಪಗಳ ಮುಂದೆ ಮತ್ತೆ ಮತ್ತೆ ಕಷ್ಟ ಪಡುವುದನ್ನು ನೋಡಿ ಅವರನ್ನು ಇನ್ನೂ ಹೆಚ್ಚು ಪ್ರಶಂಶಿಸುತ್ತೀರಿ. ಆದರೆ ತೆರೆಯ ಮೇಲೆ ಕಾಣುವ ಅವರ ಬೆರಗಾಗುವ, ಕಣ್ಣು ಕುಕ್ಕುವ ಸೌಂದರ್ಯದ ಬಗ್ಗೆ ನಿಮ್ಮ ಭ್ರಮೆಗಳು ಈಗ ಬದಲಾಗಬಹುದು.

ಎಲ್ಲಾ ಕಡೆಯಿಂದಲೂ ಮುಚ್ಚಲ್ಪಟ್ಟು ಸದಾಕಾಲ ಉರಿಯುತ್ತಿರುವ ದೊಡ್ಡ ದೊಡ್ಡ ದೀಪಗಳಿಂದ ಬಿಸಿಯಾದ ಸ್ಟೂಡಿಯೋ ಬಿಟ್ಟು ಹೊರಗೆ ಬರಲು ನಿಮಗೂ ಸಂತೋಷವಾಗಬಹುದು. ಈ ದಿನವಿದ್ದ ಶ್ರೀಮಂತನ ಮನೆ ಸೆಟ್ಟನ್ನು ಈ ದಿನ ರಾತ್ರಿಯೇ ಕೆಲಸದ ಹುಡುಗರು ಒಡೆದು ನಾಳೆ ಅದೇ ಜಾಗದಲ್ಲಿ ಕಳ್ಳನ ಗವಿಯನ್ನೋ, ಗುಡಿಸಲನ್ನೋ ನಿರ್ಮಿಸುತ್ತಾರೆ. ಅಲ್ಲಾವುದ್ದೀನನ ಅದ್ಭುತ ದೀಪದ ಭೂತಗಳಂತೆಯೇ ಚಲನಚಿತ್ರ ತಯಾರಿಸುವ ಮಾಂತ್ರಿಕರು ಗುಡಿಸಲು ಜೋಪಡಿಗಳಷ್ಟೇ ಸುಲಭವಾಗಿ ಅರಮನೆಗಳನ್ನೂ ಕೋಟೆ ಕೊತ್ತಲಗಳನ್ನೂ ಸೃಷ್ಟಿಸುತ್ತಾರೆ ಮತ್ತು ನಾಶಪಡಿಸುತ್ತಾರೆ. ಎಷ್ಟಾದರೂ ಚಲನಚಿತ್ರ ಮನುಷ್ಯನದೇ ಒಂದು ಸೃಷ್ಟಿಯಲ್ಲವೇ?

# ಕಡಲ ತೀರದಲ್ಲಿ ವಿಹಾರ

ಚಲನಚಿತ್ರದ ಎಲ್ಲಾ ಚಿತ್ರೀಕರಣಗಳೂ ಸ್ಟುಡಿಯೋ ಒಳಗೆ ನಡೆಯುವುದಿಲ್ಲ. ಕೆಲವು ದೃಶ್ಯಗಳನ್ನು ನೈಸರ್ಗಿಕ ಪರಿಸರದಲ್ಲೇ ಚಿತ್ರೀಕರಿಸಬೇಕಾಗುತ್ತದೆ. ಈಗಿನ ಕಾಲದಲ್ಲಿ ಕಡಿಮೆ ಖರ್ಚಿನಲ್ಲಿ ಚಿತ್ರಗಳನ್ನು ತಯಾರಿಸುವ ನಿರ್ಮಾಪಕರೂ ಒಳಾಂಗಣ ದೃಶ್ಯಗಳನ್ನೂ ಸಹ ಬಂಗಲೆಗಳಲ್ಲಿ, ಮನೆಗಳಲ್ಲಿ, ಆಫೀಸುಗಳಲ್ಲಿ ಚಿತ್ರೀಕರಿಸಲು ಇಚ್ಛಿಸುತ್ತಾರೆ. ಇದರಿಂದ ಸೆಟ್‌ಗಳ ಖರ್ಚನ್ನೂ ಸ್ಟೂಡಿಯೋವಿನ ಬಾಡಿಗೆಯನ್ನೂ ಉಳಿಸುತ್ತಾರೆ. ಹಾಗೆಂದ ಮಾತ್ರಕ್ಕೆ ಬಾಡಿಗೆ ಇಲ್ಲದೆ ತಮ್ಮ ಮನೆ ಅಥವಾ ಬಂಗಲೆಗಳನ್ನು ಉಪಯೋಗಿಸಲು ಜನ ಬಿಡುತ್ತಾರೆಂದಲ್ಲ. ಇವುಗಳಿಗೆ ಸ್ಟುಡಿಯೊಗಳಿಗೆ ಕೊಡುವಷ್ಟು ಬಾಡಿಗೆ ಕೊಡಬೇಕಾಗುವುದಿಲ್ಲ. ಹೊರಾಂಗಣದ ಚಿತ್ರೀಕರಣಕ್ಕೆ ಸುಲಭವಾಗಿ ತೆಗೆದುಕೊಂಡು ಹೋಗುವಂಥ ಹಗುರವಾದ ಕ್ಯಾಮರಾಗಳು, ಅಲ್ಯೂಮಿನಿಯಂ ಲೈಟುಗಳು ಮತ್ತು ಸಾಗಿಸಲನುಕೂಲವಾಗುವಂಥ ಜನರೇಟರ್‌ಗಳು ಈಚೆಗೆ ಹೆಚ್ಚು ಜನಪ್ರಿಯವಾಗುತ್ತಿವೆ. ಆದರೂ ಸಹ ತಾಂತ್ರಿಕ ನೈಪುಣ್ಯತೆಗೆ ಸ್ಟೂಡಿಯೋ ಒಳಗೇ ಹೆಚ್ಚು ಸೌಕರ್ಯಗಳಿರುತ್ತವೆ. ಮನೆ ಅಥವಾ ಬಂಗಲೆಗಳಲ್ಲಿ ಕ್ಯಾಮರಾ ಅಥವಾ ಲೈಟುಗಳನ್ನು ಬೇಕಾದ ಕಡೆಗಳಲ್ಲಿ ಇಟ್ಟುಕೊಳ್ಳುವಷ್ಟು ವಿಸ್ತಾರವಾದ ಜಾಗವಿರುವುದಿಲ್ಲ. ಛಾವಣಿ ಎತ್ತರ ಕಡಿಮೆ ಇರುತ್ತದೆ. ಆದ್ದರಿಂದ



ಹೊರಾಂಗಣ ಚಿತ್ರೀಕರಣ

ಪರಿಣಾಮಕಾರಿಯಾಗಿ ಪ್ರಕಾಶಮಾನವಾದ ದೀಪಗಳನ್ನು ಮೇಲಿಂದ ತೂಗುಬಿಡು ವುದು ಸಾಧ್ಯವಿರುವುದಿಲ್ಲ. ಶಬ್ದಾಭೇದ್ಯ (ಸೌಂಡ್ ಪ್ರೂಫ್) ಗೋಡೆಗಳಿಲ್ಲದೆ ಇರುವುದರಿಂದ ರೆಕಾರ್ಡಿಂಗ್ ಕೂಡ ಉತ್ತಮ ಮಟ್ಟದ್ದಾಗಿರುವುದಿಲ್ಲ. ಹೀಗಾಗಿ ಹೊರಾಂಗಣ ಚಿತ್ರೀಕರಣ ಸಮಯದಲ್ಲಿ ರೆಕಾರ್ಡ್ ಆಗುವ ಸಂಭಾಷಣೆಗಳನ್ನು ನಂತರ ಸ್ಟೂಡಿಯೋವಿನಲ್ಲಿ ಡಬ್ ಮಾಡಲಾಗುತ್ತದೆ. ಅಥವಾ ಪುನಃ ರೆಕಾರ್ಡ್ ಮಾಡಲಾಗುತ್ತದೆ.

ಸ್ಟೂಡಿಯೋಗಳಲ್ಲಿ ಚಿತ್ರೀಕರಣ ಮಾಡುವ ದೊಡ್ಡ ನಿರ್ಮಾಪಕರುಗಳೇ ಆಗಲಿ, ಬಂಗಲೆಗಳಲ್ಲಿ ಚಿತ್ರೀಕರಣ ಮಾಡುವ ಸಣ್ಣ ನಿರ್ಮಾಪಕರುಗಳೇ ಆಗಲಿ ಕೆಲವು ಹೊರಾಂಗಣ ದೃಶ್ಯಗಳನ್ನು ಸೂರ್ಯನ ಬೆಳಕಿನಲ್ಲೇ ಚಿತ್ರೀಕರಿಸಬೇಕಾಗುತ್ತದೆ. ಹಿಮ ಶಿಖರಗಳು, ಸಮುದ್ರ ತೀರಗಳು, ಓಡುತ್ತಿರುವ ರೈಲುಗಳು, ನಾಯಕ, ನಾಯಕಿ ಅಥವಾ ಖಳನಾಯಕನ ಗುಂಪು ದಟ್ಟ ಕಾಡಿನ ಮಧ್ಯೆ ಸವಾರಿ ಹೋಗುತ್ತಿರುವುದು, ಇಂಥ ದೃಶ್ಯಗಳನ್ನು ಸ್ಟುಡಿಯೋ ಒಳಗೆ ಸೃಷ್ಟಿಸಲಾಗುವುದಿಲ್ಲ. ಅನೇಕಾನೇಕ

ನಿರ್ಮಾಪಕರು ತಮ್ಮ ಚಿತ್ರವನ್ನು ಸುಂದರವಾಗಿ, ಆಕರ್ಷಣೀಯವಾಗಿ, ಇರುವಂತೆ ಮಾಡಲು ಕಲಾವಿದರನ್ನೂ ಪೂರ್ಣ ಸಿದ್ಧತೆಗಳನ್ನೊಳಗೊಂಡ ತಾಂತ್ರಿಕ ವರ್ಗದವರನ್ನೂ ಕಾಶ್ಮೀರ, ನೈನಿತಾಲ್, ಮಸ್ಸೂರಿ, ಊಟಿ, ಕೂನೂರುಗಳಷ್ಟೇ ಅಲ್ಲದೆ ಹಿಮಾಲಯ ಪರ್ವತದಾಚೆಗಿನ ನೇಪಾಳ, ಆಫ್ಘಾನಿಸ್ಥಾನಗಳಿಗೂ ಕರೆದುಕೊಂಡು ಹೋಗುತ್ತಾರೆ.

ಆದರೆ ಮುಂಬೈನಿಂದ ಒಂದೇ ದಿನದ ಪ್ರಯಾಣದಲ್ಲಿ ಯಾವುದಾದರೊಂದು ಚಿತ್ರೀಕರಣ ನೋಡಬೇಕೆಂದರೆ ಮಲಾಡ್‌ಗೆ ಹೋಗುವ ರೈಲು ಹಿಡಿದು ಅಲ್ಲಿಂದ ಬಸ್ಸಿನಲ್ಲಿ ಮಾಢ್ ದ್ವೀಪಕ್ಕೆ ಹೋಗಬೇಕು. ಇದು ನಿಜವಾಗಿಯೂ ದ್ವೀಪವಲ್ಲದಿದ್ದರೂ ಒಂದು ಸುಂದರವಾದ ಸಮುದ್ರ ತೀರ.

ಈ ತೀರ ಪ್ರದೇಶ ತಾಳೆ ಮರಗಳಿಂದ ತುಂಬಿದೆ. ತೀರದ ಸಮೀಪದಲ್ಲೇ ಒಂದು ಸುಂದರವಾದ ಹಳೇ ಕಾಲದ ಕ್ರೈಸ್ತ ದೇವಾಲಯವಿದೆ. ಇದರ ಸಮೀಪದಲೇ

ಮಾಢ್ ದ್ವೀಪದಲ್ಲಿ ಚಿತ್ರೀಕರಣ



ಇರುವ ಸಣ್ಣ ಕುಟೀರಗಳನ್ನು ಕಲಾವಿದರು ಡ್ರೆಸ್ ಮಾಡಿಕೊಳ್ಳಲು ಅಥವಾ ಊಟದ ನಂತರ ಆರಾಮ ಪಡೆಯಲು ಬಾಡಿಗೆಗೆ ಪಡೆಯಬಹುದು. ಮಿಕ್ಕಂತೆ ಇದು ಸಮುದ್ರ ತೀರದಲ್ಲಿ ಒಂದು ವಿಹಾರವಿದ್ದಂತೆ.

ತಾಳೆ ಮರಗಳ ನೆರಳಿನಲ್ಲಿ ಎರಡು ದೊಡ್ಡ ಟ್ರಕ್‌ಗಳೂ ಮತ್ತು ಹಲವಾರು ಕಾರುಗಳು ನಿಂತಿರುತ್ತವೆ. ಒಂದು ಕ್ಯಾಮರಾ, ದೊಡ್ಡ ಟೇಪ್‌ರೆಕಾರ್ಡರ್, ಹಿನ್ನೆಲೆ ಸಂಗೀತವನ್ನು ರೆಕಾರ್ಡ್ ಮಾಡುವ ಯಂತ್ರ, ಕ್ಯಾಮರಾ ತಳ್ಳುವ ಟ್ರಾಲಿಗಳು ಮತ್ತು ರಿಫ್ಲೆಕ್ಟರ್‌ಗಳು 'ಸೌಂಡ್ ಟ್ರಕ್' ಎಂದು ಕರೆಯಲಾಗುವ ಲಾರಿಯಲ್ಲಿರುತ್ತವೆ.

ಪಾತ್ರಧಾರಿಗಳು ಸಾಕಷ್ಟು ಬೆಳಕಿಲ್ಲದೆ ನೆರಳಿನಲ್ಲಿ ನಿಲ್ಲಬೇಕಾಗಿ ಬಂದಾಗ ಸೂರ್ಯನ ಬೆಳಕನ್ನು ಅವರ ಮುಖದ ಮೇಲೆ ಬೀಳುವಂತೆ ಮಾಡಲು 'ರಿಫ್ಲೆಕ್ಟರ್'ಗಳನ್ನು ಬಳಸಲಾಗುತ್ತದೆ. ದೊಡ್ಡ ಅಥವಾ ಸಣ್ಣ ಮರದ ಹಲಗೆಗಳ ಮೇಲೆ ಬೆಳ್ಳಿ ಕಾಗದ



ಅಂಟಿಸಿ ರಿಫ್ಲೆಕ್ಟರ್‌ಗಳನ್ನು ಸಿದ್ಧ ಪಡಿಸುತ್ತಾರೆ. ಕ್ಯಾಮರಾ ಮತ್ತು ಟೇಪ್ ರೆಕಾರ್ಡರ್‌ಗಳನ್ನು ಒಂದೇ ವೇಗದಲ್ಲಿ ಓಡಿಸಲು ಅವಶ್ಯಕವಾದ ಜನರೇಟರ್ ಇನ್ನೊಂದು ಟ್ರಕ್ಕಿನಲ್ಲಿ ಇರುತ್ತದೆ. ಅಗತ್ಯವಾದ ವಿದ್ಯುಚ್ಛಕ್ತಿ ಉತ್ಪಾದನೆಗೆ ಈ ಜನರೇಟರನ್ನು ಬಳಸಲಾಗುತ್ತದೆ. ಈ ಎರಡೂ ಉಪಕರಣಗಳನ್ನು ಒಂದೇ ವೇಗದಲ್ಲಿ ಓಡಿಸುವುದನ್ನು ಮೇಳೈಸುವುದು ಅಥವಾ ಹೊಂದಾಣಿಸುವುದು (ಇನ್ ಸಿಂಕ್) ಎಂದು ಕರೆಯುತ್ತಾರೆ.

ಹೊರಾಂಗಣ ಚಿತ್ರೀಕರಣ ನಮಗೆಲ್ಲಾ ಒಳ್ಳೆ ಪಿಕ್‌ನಿಕ್‌ನಂತೆ ಕಾಣಬಹುದು. ಆದರೆ ಭಾರವಾದ ದೀಪಗಳನ್ನೂ ಪ್ರತಿಫಲಕ (ರಿಫ್ಲೆಕ್ಟರ್)ಗಳನ್ನೂ ಹೊರುವ ತಾಂತ್ರಿಕ ವರ್ಗದವರಿಗೂ ಪ್ರತಿಫಲಕದಿಂದ ನೇರವಾಗಿ ಕಣ್ಣಿಗೆ ಚುಚ್ಚುವ ಬೆಳಕನ್ನು ಸಹಿಸುವ ಕಲಾವಿದರಿಗೂ ಇದು ಪಿಕ್‌ನಿಕ್ ಅಲ್ಲ. ನಿಜವಾಗಿ ಹೇಳಬೇಕಾದರೆ ಈ ಪ್ರತಿಫಲಕಗಳಿಂದ ಬಿದ್ದ ಬೆಳಕಿನಿಂದ ಕಣ್ಣೀರು ಸುರಿಯುವುದನ್ನು ತಡೆದು ಕೊಳ್ಳುವುದನ್ನು ಅಭ್ಯಾಸ ಮಾಡಿಕೊಳ್ಳಲು ಕಲಾವಿದರಿಗೆ ಅನೇಕ ವರ್ಷಗಳು ಬೇಕಾಗುತ್ತದೆ. ನೀವು ಮುಂದೆ ಯಾವಾಗಲಾದರೂ ಚಿತ್ರದಲ್ಲಿ ನಿಮ್ಮ ಅಚ್ಚುಮೆಚ್ಚಿನ ನಟ ಬಿಸಿಲಿನಲ್ಲಿ ನಗುತ್ತಾ ನಿಂತಿರುವ ದೃಶ್ಯವನ್ನು ನೋಡಿದಾಗ ಅವನು ಬಾಣದಂತೆ ಮುಖದ ಮೇಲೆ ಬಿದ್ದು ಚುಚ್ಚುತ್ತಿರುವ ಬೆಳಕಿನಿಂದ ಹೇಗೆ ಕಷ್ಟಪಡುತ್ತಿರಬಹುದೆಂಬುದನ್ನು ಯೋಚಿಸಿ.

ಹೊರಾಂಗಣದ ಚಿತ್ರೀಕರಣಕ್ಕೆ ಮುಂಜಾನೆಯ ಎಳೆಬಿಸಿಲು ಉತ್ತಮವೆಂದು ಎಲ್ಲರಿಗೂ ಗೊತ್ತು. ಆ ನಂತರ ಬಿಸಿಲಿನ ತೀವ್ರತೆ ಹೆಚ್ಚಿ, ಸೂರ್ಯ ನೆತ್ತಿಯ ಮೇಲೆ ಬಂದಾಗ ನಾಯಕ ನಾಯಕಿಯರ ಕಣ್ಣುಗಳ ಕೆಳಗೆ ನೆರಳು ಬೀಳಲಾರಂಭಿಸುತ್ತದೆ. ಇದರಿಂದ ಕಲಾವಿದರಿಗೆ ಕಷ್ಟವಾದರೂ ಪ್ರತಿಫಲಕಗಳನ್ನು ಉಪಯೋಗಿಸಲೇ ಬೇಕಾಗುತ್ತದೆ. ಆದರೆ ಸಾಮಾನ್ಯವಾಗಿ ಹತ್ತು ಹನ್ನೊಂದು ಗಂಟೆಗೆ ಮೊದಲು ಕೆಲಸ ಪ್ರಾರಂಭವಾಗುವುದು ಕಷ್ಟ. ರಾತ್ರಿ ಪಾರ್ಟಿಗೆ ಹೋಗಿದ್ದ ನಾಯಕ ಹೊತ್ತಾಗಿ ಏಳುತ್ತಾನೆ. ನಾಯಕಿಯ ಅಲಂಕಾರ ಪೂರ್ಣವಾಗಿ ಅವಳು ಸಿದ್ಧಳಾಗಲು ಎರಡು ಗಂಟೆ ತೆಗೆದುಕೊಳ್ಳುತ್ತಾಳೆ. ಸಂಭಾಷಣೆಯ ಅಭ್ಯಾಸಕ್ಕೆ ಹೆಚ್ಚು ಸಮಯ ಬೇಕು. ಹೀಗಾಗಿ ಎಲ್ಲರೂ ಒಟ್ಟಿಗೆ ಸಮುದ್ರ ತೀರದಲ್ಲಿ ಸೇರಿ, ನಾಯಕ ನಾಯಕಿಯರು ಈಜುವ ಬಟ್ಟೆಗಳನ್ನು ಧರಿಸಿ ಅಥವಾ ತೋಳು ಮೇಲಕ್ಕೆ ಮಾಡಿದ ಬಟ್ಟೆ ಧರಿಸಿ, ಚಿತ್ರೀಕರಣ ಪ್ರಾರಂಭವಾಗುವ ಸಮಯಕ್ಕೆ ಮರಳು ಚೆನ್ನಾಗಿ ಬಿಸಿಯಾಗಿರುತ್ತದೆ ಮತ್ತು ಬಿಸಿಲಿನ ತಾಪಕ್ಕೆ ಮೈ ಸುಡುತ್ತಿರುತ್ತದೆ. ಈ ಸಮಯದಲ್ಲಿ ಕ್ಯಾಮರಾವನ್ನು



ಚಿತ್ರೀಕರಣಕ್ಕೆ ಮುಂಚೆ ನಟರು ವಿಶ್ರಮಿಸುತ್ತಿರುವುದು

ಒಂದು ದೊಡ್ಡ ಛತ್ರಿಯ ಕೆಳಗೆ ಇಟ್ಟು ಅದನ್ನು ಬಿಸಿಲಿನಿಂದ ಕಾಪಾಡಲಾಗುತ್ತದೆ.

ಹೊರಾಂಗಣದ ಚಿತ್ರೀಕರಣ ಬರೀ ರೊಮ್ಯಾಂಟಿಕ್ ಹಾಡು ಮತ್ತು ಕುಣಿತಗಳಿಗೆ ಸೀಮಿತವಾಗಿರುವುದಿಲ್ಲ. ಭಾವಪೂರ್ಣ ನಾಟಕೀಯ ದೃಶ್ಯಗಳೂ ಇರಬಹುದು — ಸಮುದ್ರ ತೀರದ ಹೊಡೆದಾಟ, ಅಲೆಗಳೇಳುತ್ತಿರುವ ಸಮುದ್ರದ ಮೇಲೆ ಸ್ಟೀಮರ್ ಅಥವಾ ದೋಣಿಯ ದೃಶ್ಯ ಅಥವಾ ಒಂದು ಪಿಕ್‌ನಿಕ್ ದೃಶ್ಯವೇ ಆಗಿರಬಹುದು. ಆದರೆ ನಿಮಗೆ ಈಗ ತಿಳಿದ ಹಾಗೆ ಚಿತ್ರೀಕರಣ ಪಿಕ್‌ನಿಕ್ ಅಲ್ಲ.

ಆದರೂ ಸ್ಟೂಡಿಯೋವಿನ ನಾಲ್ಕು ಗೋಡೆಗಳಿಂದ ಹೊರಗೆ, ಯಾವ ಬಂಧನವೂ ಇಲ್ಲದೆ, ಹಾಯಾಗಿರುವ ಅನುಭವವಾಗುತ್ತದೆ. ರೂಪವಂತನಾದ ನಾಯಕ, ಸುಂದರಿಯಾದ ನಾಯಕಿ, ಸಮರ್ಥರಾದ ನಿರ್ದೇಶಕ, ಛಾಯಾಗ್ರಾಹಕ ಮುಂತಾದವರು ಬಾಡಿಗೆಯ ಸೌಂಡ್ ಟ್ರಕ್ಕಿನ ತಂತ್ರಜ್ಞರು, ಅವರ ಸಹಾಯಕರು, ದೃಶ್ಯಗಳ ಅಂತ್ಯ ಮತ್ತು ಪ್ರಾರಂಭದ ವಿವರಗಳನ್ನು ನೋಡಿಕೊಳ್ಳುವ ಹುಡುಗಿ (ಕಂಟಿನ್ಯುಯಿಟಿ ಗರ್ಲ್)

ಸಹಾಯಕ ನಿರ್ದೇಶಕರು, ಬಣ್ಣ ಸಜ್ಜಿಗೆಯವರು, ಅವರ ಸಹಾಯಕರು, ವಸ್ತ್ರಾಲಂಕಾರದಲ್ಲಿ ಸಹಾಯ ಮಾಡುವವರು ಎಲ್ಲರೂ ಕಲೆತು ಯಾವ ರೀತಿಯ ವ್ಯತ್ಯಾಸವೂ ಇಲ್ಲದೆ ಕೆಲಸ ಮಾಡುತ್ತಾರೆ.

ಟ್ರಕ್ಕಿನ ಜನಗಳೊಡನೆ ಮಾತನಾಡುತ್ತಿದ್ದರೆ ಪ್ರಖ್ಯಾತ ನಾಯಕ ನಾಯಕಿಯರ ಬಗ್ಗೆ ಆಸಕ್ತಿಯುತವಾದ ಕಥೆಗಳನ್ನು ಹೇಳುತ್ತಾರೆ. ಅವರ ಒಣಹೆಮ್ಮೆ, ಹೊಟ್ಟೆಕಿಚ್ಚು, ಒಳ್ಳೆತನ, ಕೆಟ್ಟತನ ಎಲ್ಲದರ ಬಗ್ಗೆಯೂ ಕಥೆಗಳನ್ನು ಹೇಳುತ್ತಾರೆ. ಬೇರೆ ಬೇರೆ ಕಂಪೆನಿಗಳಿಂದ ಪೂರ್ಣ ಸಿದ್ಧತೆಯುಳ್ಳ ಈ ಟ್ರಕ್ಕುಗಳನ್ನು ಹತ್ತಿರದ ಹೊರಾಂಗಣದ ಚಿತ್ರೀಕರಣಕ್ಕೆ ಮಾತ್ರವಲ್ಲದೆ ದೂರದ ಕಾಶ್ಮೀರ, ಅಸ್ಸಾಂ, ಮೇಘಾಲಯದಂಥ ಜಾಗಗಳಿಗೂ ಬಾಡಿಗೆಗೆ ಕೊಂಡೊಯ್ಯುತ್ತಾರೆ. ಇವರುಗಳು ಒಂದು ತಿಂಗಳು ರಾಜಾಸ್ಥಾನದ ಮರಳು ಭೂಮಿಯಲ್ಲಿ ಬೆಂದು ಹೋದರೆ ಮತ್ತೊಂದು ತಿಂಗಳು ಶ್ರೀನಗರ ಅಥವಾ ಗುಲ್ಮಾರ್ಗಿನ ಚಳಿಯಲ್ಲಿ ಹೆಪ್ಪುಗಟ್ಟಿ ಹೋಗಬಹುದು. ಇವರುಗಳು ರೋಮಾಂಚನಕಾರಿಯಾದ ಅನೇಕ ಪ್ರದೇಶಗಳನ್ನು, ಕಲಾವಿದರ ವಿಧವಿಧವಾದ ಮನೋವೃತ್ತಿಗಳನ್ನು ನೋಡುತ್ತಾರೆ. ಅವರ ಪೈಕಿ ಯಾರಾದರೂ ಒಂದು ಪುಸ್ತಕ ಬರೆದರೆ ಬಹಳ ಆಕರ್ಷಕವಾದ ಕಥೆಯನ್ನು ಬರೆಯಬಲ್ಲರು.



# ಪಿಶಾಚಿಗಳ ಗಾನ

ಚಲನಚಿತ್ರಗಳು ಮಾತಾಡಲು ಪ್ರಾರಂಭಿಸಿದಾಗಲೇ ಹಾಡಲೂ ಪ್ರಾರಂಭಿಸಿದುವು.

ಮೊದಮೊದಲು ಭಾರತದಲ್ಲಿ ಚಲನಚಿತ್ರಗಳನ್ನು ಜಾಹೀರಾತುಗಳಲ್ಲಿ 'ಮಾತನಾಡುವ, ಹಾಡುವ' ಚಿತ್ರಗಳೆಂದು ಪ್ರಚಾರ ಮಾಡಲಾಗುತ್ತಿತ್ತು.

ಸಂಗೀತ ನಾಟಕಗಳನ್ನು ಚಲನಚಿತ್ರವಾಗಿ ಪರಿವರ್ತಿಸಲು ಮತ್ತು ಹಾಡುವ ನಟನಟಿಯರಿಗೂ ಬಹಳ ಬೇಡಿಕೆಗಳು ಆಗ ಪ್ರಾರಂಭವಾಯಿತು. ಒಬ್ಬ ನಟನಲ್ಲಿ ರೂಪ ಮತ್ತು ನಟನಾ ಕೌಶಲ್ಯಕ್ಕಿಂತ ಹೆಚ್ಚಾಗಿ ಹಾಡುವ ಪ್ರತಿಭೆಯನ್ನೇ ಅರಸುತ್ತಿದ್ದರು.

ಕೆಲವು ವರ್ಷಗಳ ನಂತರ ಹಿನ್ನೆಲೆ ಗಾಯನ ರೂಢಿಗೆ ಬಂತು. ಇದು ಚಲನಚಿತ್ರ ಪ್ರಪಂಚದಲ್ಲಿ ಒಂದು ದೊಡ್ಡ ಕ್ರಾಂತಿಯನ್ನುಂಟು ಮಾಡಿತು. ಇಂಥ ದೊಡ್ಡ ಚಮತ್ಕಾರದ ಮಹತ್ವವನ್ನು ಅರ್ಥಮಾಡಿಕೊಳ್ಳುವ ಮೊದಲು ಚಲನ ಚಿತ್ರಗಳಿಗೆ ಧ್ವನಿ ಮುದ್ರಿಕೆ ಹೇಗೆ ಮಾಡಲಾಗುತ್ತದೆ ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯಕ.

ಛಾಯಾಗ್ರಹಣ ಮತ್ತು ಧ್ವನಿಮುದ್ರಿಕೆಯ ನಿಯಮಗಳ ಮಿಲನದಿಂದಾಗಿ ವಾಕ್ಚಿತ್ರಗಳು ರೂಪುಗೊಂಡವು. ಮೊದಮೊದಲಲ್ಲಿ ಮೂಕ ಚಿತ್ರಗಳನ್ನು ಪರದೆಯ



ಆಸ್ಮಾನ್ ಮಹಲ್ ಚಿತ್ರದ
ಒಳಾಂಗಣ ಚಿತ್ರೀಕರಣದಲ್ಲಿ
ಪೃಥ್ವಿರಾಜ್ ಕಪೂರ್

ಮೇಲೆ ತೋರಿಸಿದಾಗ ಜನರ ಮನರಂಜನೆಗಾಗಿ ವಾದ್ಯವೃಂದಗಳು ಅಲ್ಲಲ್ಲಿ ಸಂಗೀತ ನೀಡುತ್ತಿದ್ದುವು. ಓದಲು ಬರದೇ ಇದ್ದವರ ನೆರವಿಗಾಗಿ ಒಬ್ಬ ಮನುಷ್ಯ ಚಿತ್ರಮಂದಿರದಲ್ಲಿ ಕುಳಿತು ಪರದೆಯ ಮೇಲೆ ತೋರಿಸುತ್ತಿದ್ದ ಹೆಸರು ಮತ್ತು ಇತರ ವಿವರಗಳನ್ನು ಗಟ್ಟಿಯಾಗಿ ಓದುತ್ತಿದ್ದ. ಇಷ್ಟೆ ಅಲ್ಲದೆ ಮೂಕ ಚಿತ್ರಗಳ ಪಾತ್ರಧಾರಿಗಳು ಸಂದರ್ಭಕ್ಕೆ ಸರಿಯಾಗಿ ಏನು ಸಂಭಾಷಣೆ ನಡೆಸಿರಬಹುದೋ ಅಂಥ ಸಂಭಾಷಣೆಗಳನ್ನು ನೀಡುತ್ತಿದ್ದ. ಹೀಗೆ ಒಂದು ರೀತಿಯ ವೀಕ್ಷಿಕ ವಿವರಣೆ (ರನ್ನಿಂಗ್ ಕಾಮೆಂಟ್ರಿ) ನೀಡುತ್ತಿದ್ದ. ಇದರ ನಂತರದ ಬೆಳವಣಿಗೆ ಎಂದರೆ ವಾದ್ಯವೃಂದಕ್ಕೆ ಬದಲಾಗಿ ಗ್ರಾಮಫೋನ್ ರೆಕಾರ್ಡ್ ಬಳಸುವ ಪದ್ಧತಿ. ನಂತರ ಸಂಗೀತ ಮತ್ತು ಸಂಭಾಷಣೆಗಳನ್ನು ಮೂಕ ಚಿತ್ರಗಳ ಜೊತೆ ಗ್ರಾಮಫೋನ್ ಮೂಲಕ ಹಾಕಲಾಯಿತು. ಮೂಕಚಿತ್ರ ಮತ್ತು ಗ್ರಾಮಫೋನ್ ಒಂದೇ ವೇಗದಲ್ಲಿ ಕೆಲಸಮಾಡಿ ಪ್ರೇಕ್ಷಕರಿಗೆ ಪರದೆ ಮೇಲಿನ ಪಾತ್ರಗಳೇ ಮಾತನಾಡುತ್ತಿದ್ದಾರೆಂಬಂತೆ ಅನ್ನಿಸುತ್ತಿತ್ತು.

ಛಾಯಗ್ರಹಣದೊಡನೆ ಧ್ವನಿ ಫಿಲ್ಮ್ ಮೇಲೆ ಮುದ್ರಿತವಾದ ನಂತರವೇ ನಿಜವಾದ ವಾಕ್ಚಿತ್ರ ಸಾಧ್ಯವಾಯಿತು. ಪ್ರಿಂಟ್ ಮಾಡುವಾಗ ಈ ಧ್ವನಿ ಪಥ (ಸೌಂಡ್ ಟ್ರ್ಯಾಕ್) ವನ್ನು ಫಿಲ್ಮ್ ಪಟ್ಟಿಯ ಎಡಭಾಗದಲ್ಲಿ ಪ್ರಿಂಟ್ ಮಾಡುತ್ತಾರೆ.

ಇದನ್ನು ಮಾಡುವ ಕ್ರಮ ಹೀಗೆ. ನಟನಟಿಯರ ಧ್ವನಿಯನ್ನು ಗ್ರಹಿಸಲು ಅನುಕೂಲವಾಗುವಂತೆ ಸೆಟ್ಟಿನಲ್ಲೇ ಒಂದು ಮೈಕ್ರೊಫೋನನ್ನು ತೂಗು ಹಾಕಿರುತ್ತಾರೆ. ಆದರೆ ಇದು ಛಾಯಾಗ್ರಹಣದ ಚೌಕಟ್ಟಿನಲ್ಲಿ ಬರದಂತೆ ದೂರ ವಿರುತ್ತದೆ. ಈ ಮೈಕ್ರೊಫೋನ್ ವಿದ್ಯುತ್ ತಂತಿಗಳ ಮೂಲಕ ಧ್ವನಿ ಮುದ್ರಕನ ಕೊಠಡಿಗೆ ಸೇರಿರುತ್ತದೆ. ಇಲ್ಲಿ ಕ್ಯಾಮರಾದೊಡನೆ ಮೇಳೈಸಿರುವ ಮುದ್ರಿಕೆ ಯಂತ್ರದ ಮೂಲಕ ಒಂದು ಫಿಲ್ಮ್ ಹೋಗುತ್ತದೆ. ಅಂದರೆ ಮುದ್ರಿಕೆ ಯಂತ್ರ ಕ್ಯಾಮರಾದ ವೇಗಕ್ಕೆ ಸರಿಸಮನಾಗಿ ಕೆಲಸ ಮಾಡಿ ಧ್ವನಿಯನ್ನು ಫಿಲ್ಮ್‌ನ ಒಂದು ಭಾಗದಲ್ಲಿ ಅಂಕುಡೊಂಕಾಗಿ ಗೆರೆಗಳ ಮಾದರಿಯಲ್ಲಿ ಮುದ್ರಿಸುತ್ತದೆ. ನಂತರ ಈ ಧ್ವನಿ ಪಥವನ್ನು ಕ್ಯಾಮರಾದ ಫಿಲ್ಮ್‌ನ ಮೇಲೆ ವರ್ಗಾಯಿಸಿ, ನಂತರ ಪ್ರಿಂಟ್ ಮಾಡಲಾಗುತ್ತದೆ. ಹೀಗೆ ಪೂರ್ಣವಾದ ಫಿಲ್ಮ್ ತಯಾರಾಗುತ್ತದೆ. ಹೀಗೆ ಸಿದ್ಧವಾದ ಫಿಲ್ಮ್‌ನ್ನು ಚಿತ್ರಮಂದಿರದಲ್ಲಿ ಪ್ರೊಜೆಕ್ಟರ್ ಮೂಲಕ ಬಿಟ್ಟಾಗ ಪ್ರಕಾಶಮಾನವಾದ ಬೆಳಕಿನ ಕಿರಣ ಚಿತ್ರಗಳನ್ನು ಪರದೆಯ ಮೇಲೆ ದೊಡ್ಡದಾಗಿ ಕಾಣುವಂತೆ

ಪ್ರತಿಬಿಂಬಿಸುತ್ತದೆ. ವಿದ್ಯುಚ್ಛಕ್ತಿಯ ಕಿರಣವೊಂದು ಧ್ವನಿಪಥದ ಮೇಲೆ ಹೋಗಿ ವಿದ್ಯುತ್ ಪ್ರಭೆ (ಎಲೆಕ್ಟ್ರಿಕಲ್ ಇಂಪಲ್ಸ್) ಗಳನ್ನು ಹೊರಪಡಿಸಿ ಅದು ಪರಿವರ್ಧಕ (ಆ್ಯಂಪ್ಲಿಫೈಯರ್)ದ ಮೂಲಕ ಹೋಗಿ ಪರದೆಯ ಹಿನ್ನೆಲೆಯಲ್ಲಿಟ್ಟಿರುವ ಧ್ವನಿ ವರ್ಧಕ (ಲೌಡ್ ಸ್ಪೀಕರ್)ದ ಮೂಲಕ ಜನರಿಗೆ ಕೇಳಿಸುತ್ತದೆ. ಪಾತ್ರಗಳ ಚಲನೆ, ಅವರ ತುಟಿಗಳ ಚಲನೆ ಮತ್ತು ಧ್ವನಿ ಮುದ್ರಿಕೆಗಳಲ್ಲಿ ಸಂಪೂರ್ಣ ಹೊಂದಾಣಿಕೆ ಇರುವುದರಿಂದ ಪರದೆ ಮೇಲಿನ ಪಾತ್ರಗಳೇ ಮಾತನಾಡುತ್ತಿರುವ ಹಾಗೆ ನಮಗೆ ಭಾಸವಾಗುತ್ತದೆ.

ಈಚೆಗೆ ಛಾಯಾಗ್ರಹಣದಲ್ಲೂ ಧ್ವನಿ ಮುದ್ರಿಕೆಯಲ್ಲೂ ಬಹಳ ಬದಲಾವಣೆ ಆಗಿವೆ. ಕಪ್ಪು ಬಿಳುಪು ಚಿತ್ರಗಳ ಸ್ಥಾನವನ್ನು ವರ್ಣಚಿತ್ರ ಆವರಿಸಿದೆ. ಹಳೆಯ ಧ್ವನಿಯಂತ್ರಗಳ ಬದಲಾಗಿ ಹೊಸ ಮಾದರಿಯ ಯಂತ್ರಗಳು ಬಂದಿವೆ. ಇದರಿಂದ ಸ್ವೀಕೃತ ಧ್ವನಿ ಭಾಗ (ಟೇಕ್ಸ್) ಗಳನ್ನು ಮಾತ್ರ ಫಿಲ್ಮ್‌ಗೆ ರವಾನಿಸುವುದು ಅನುಕೂಲವಾಗುತ್ತದೆ. ಆದಾಗ್ಯೂ ಮೂಲ ನಿಯಮಗಳೆಲ್ಲಾ ಒಂದೇ.

ಈ ಎರಡೂ ಮೂಲ ಪಟಲ (ಫಿಲ್ಮ್)ಗಳು — ಅಂದರೆ ಒಂದು ಚಿತ್ರದ್ದು ಮತ್ತೊಂದು ಧ್ವನಿ ಮುದ್ರಿಕೆಯದು — ಬೇರೆ ಬೇರೆಯಾದ್ದರಿಂದ ಹೇಗೆ ಒಂದಾಗಿ ಮಾಡುತ್ತಾರೆ ಎನ್ನಿಸಬಹುದಲ್ಲವೇ? ಒಂದು ಕರೀ ಹಲಗೆಯ ಮೇಲೆ ಚಿತ್ರದ ಹೆಸರು, ದೃಶ್ಯದ ಸಂಖ್ಯೆ ಅಥವಾ ಸ್ವೀಕೃತ ಭಾಗಗಳನ್ನು ಬರೆದು ಅದರ ಸಹಾಯ ದಿಂದ ಹೊಂದಾಣಿಸುತ್ತಾರೆ. ಈ ಹಲಗೆಯ ಮೇಲೆ ಕೀಲಿನಿಂದ ಜೋಡಿಸಿದ ಒಂದು ಕೈ ಇರುತ್ತದೆ. ಇದನ್ನು 'ಕ್ಲ್ಯಾಪ್-ಸ್ಟಿಕ್' ಎನ್ನುತ್ತಾರೆ. ಪ್ರತಿಯೊಂದು ದೃಶ್ಯಗ್ರಹಣದ ಪ್ರಾರಂಭದಲ್ಲಿ ಕ್ಲ್ಯಾಪ್-ಸ್ಟಿಕ್ ಅನ್ನು ಕ್ಯಾಮರಾದ ಮುಂದೆ ತರುತ್ತಾರೆ. ನಿರ್ದೇಶಕ 'ಸೌಂಡ್ ಸ್ಟಾರ್ಟ್' ಎಂದ ತಕ್ಷಣ ಧ್ವನಿ ಮುದ್ರಣಕ್ಕೆ ತಯಾರಾಗಿ 'ಕ್ಯಾಮರಾ' ಎಂದೊಡನೆ ಛಾಯಾಗ್ರಾಹಕ ಕೆಲಸ ಆರಂಭಿಸುತ್ತಾನೆ. ಆ ತಕ್ಷಣ ಸಂಖ್ಯಾದರ್ಶಕ (ಕ್ಲ್ಯಾಪ್ ಬಾಯ್) ದೃಶ್ಯದ ಸಂಖ್ಯೆ, ಯಾವ ದೃಶ್ಯಗ್ರಹಣ, ಎಷ್ಟನೇ ಸ್ವೀಕೃತ ಭಾಗ ಇವೆಲ್ಲವನ್ನೂ ಬರೆದಿರುವ ಬೋರ್ಡನ್ನು ಕೂಗಿ ಹೇಳುತ್ತಾ ಬೋರ್ಡಿನ ಮೇಲಿನ ಕೈಯ್ಯನ್ನು ಹೊಡೆದು ಕೆಳಗೆ ತರುತ್ತಾನೆ. ಈ ಹೊಡೆತದ ಸದ್ದು ಧ್ವನಿ ಮುದ್ರಿತವಾಗುತ್ತದೆ. ಮತ್ತು ಅದು ಧ್ವನಿ ಪಥದ ಮೇಲೆ ಒಂದು ಸ್ಪಷ್ಟವಾದ ಗುರುತನ್ನು ಬಿಡುತ್ತದೆ. ಎರಡೂ ಪಥಗಳನ್ನು ಹೊಂದಾಣಿಸುವಾಗ ಚಿತ್ರವಿರುವ ಫಿಲ್ಮ್‌ನ ಚೌಕಟ್ಟಿನ ಜೊತೆಗೆ ಇದನ್ನು ಜೋಡಿಸಲಾಗುವುದು.

ಮೊದಮೊದಲು ಹಾಡುಗಳನ್ನು ಕ್ಯಾಮರಾದ ಮುಂದೆ ಸಂಭಾಷಣೆಗಳಂತೆ ಹಾಡುತ್ತಿದ್ದರು. ನಟನಾದವನಿಗೆ ಹಾಡುಗಾರಿಕೆ ತಿಳಿದಿರಲೇಬೇಕು, ಹಾಡುವವನಿಗೆ ಅಭಿನಯ ತಿಳಿದಿರಲೇಬೇಕೆಂದರೆ ಹೇಗೆ ಸಾಧ್ಯ? ಇದಷ್ಟೆ ಅಲ್ಲದೆ ಕೆಲವರ ಧ್ವನಿ ಧ್ವನಿಮುದ್ರಣಕ್ಕೆ ಸರಿ ಹೊಂದುವುದಿಲ್ಲ. ಅದೂ ಅಲ್ಲದೆ ಧ್ವನಿ ಮುದ್ರಣ ಮತ್ತು ಚಿತ್ರಗ್ರಹಣ ಎರಡೂ ಏಕಕಾಲಕ್ಕೇ ಆಗಬೇಕಾಗಿರುವುದರಿಂದ ಜೊತೆಯಲ್ಲಿರುವ ವಾದ್ಯವೃಂದ ಚಿಕ್ಕದಾಗಿರಬೇಕಾಗುತ್ತದೆ. ಇದಕ್ಕೆ ಕಾರಣ ಈ ವಾದ್ಯವೃಂದ ಹಾಡುವವನ ಮತ್ತು ಧ್ವನಿಗ್ರಹಣ ಯಂತ್ರದ ಹತ್ತಿರವಿರಲೇ ಬೇಕಾದರೂ ಕ್ಯಾಮರಾದಿಂದ ದೂರವಿರಲೇಬೇಕಾಗುತ್ತದೆ. ಅದೂ ಅಲ್ಲದೆ ದೃಶ್ಯಗ್ರಹಣಗಳಿಗೆ ಕ್ಯಾಮರಾವನ್ನು ಬೇರೆ ಬೇರೆ ಕೋನಗಳಲ್ಲಿ ಇಡುವುದೂ ಸಾಧ್ಯವಿರಲಿಲ್ಲ. ಹಿನ್ನೆಲೆ ಸಂಗೀತದ ಕ್ರಮದಿಂದಾಗಿ ಇದೆಲ್ಲಾ ಬದಲಾಗಿ ಹೋಯಿತು.

ಹಿನ್ನೆಲೆ ಸಂಗೀತದಿಂದಾಗಿ ಹಾಡುಗಳನ್ನು ಪೂರ್ಣ ವಾದ್ಯವೃಂದದ ಜೊತೆಗೆ ಯಾವ ತಪ್ಪುಗಳೂ ಇಲ್ಲದೆ ಮೊದಲೇ ಧ್ವನಿಮುದ್ರಣ ಮಾಡಿ, ಸೆಟ್‌ನಲ್ಲೋ ಅಥವಾ ಹೊರಾಂಗಣದಲ್ಲೋ ಹಾಕುತ್ತಾರೆ. ಅದಕೆ, ತಕಂತೆ ತುಟಿ ಚಲನೆಯನ್ನು

ಸತ್ಯಜಿತ್‌ರೇ ತಮ್ಮ ಕ್ಯಾಮರಾ ತಂಡದೊಡನೆ



ಹೊಂದಿಸಿ ನಟನಟಿಯರು ಹಾಡುವಂತೆ ನಟಿಸುತ್ತಾರೆ. ಆದ್ದರಿಂದ ಈಗ ಉತ್ತಮ ಮಟ್ಟದ ಸಂಗೀತ ತಿಳಿದವರನ್ನೇ ಧ್ವನಿಮುದ್ರಣಕ್ಕೆ ಉಪಯೋಗಿಸಿಕೊಳ್ಳಬಹುದು. ನಟನಟಿಯರಿಗೆ ಹಾಡುವುದು ಬರಲೇಬೇಕೆಂಬ ಅವಶ್ಯಕತೆಯಿಲ್ಲ. ಹಾಡಲು ಬಾರದ ಆದರೆ ವಿದ್ಯಾವಂತರಾದ ಅನೇಕ ನಟನಟಿಯರನ್ನು ರಜತ ಪರದೆ ಈಗ ಬರಮಾಡಿಕೊಳ್ಳುತ್ತಿದೆ. ಈ ಹಿನ್ನೆಲೆ ಗಾಯನ ಕ್ರಮ ಹಾಡುತ್ತಿದ್ದ ನಟರಿಗೆ (ನಿಜವಾಗಿ ಅವರು ಎಷ್ಟೋ ವೇಳೆ ನಟರಾಗಲೇ ಇಲ್ಲ) ಪೂರ್ಣ ಸ್ವಾತಂತ್ರ್ಯ ಕೊಟ್ಟು, ಹೊಸ ನಟನಟಿಯರ ಒಂದು ತಲೆಮಾರನ್ನೇ ತಂದಿತು. ಆದರೆ ಅದರ ಜೊತೆಗೆ ಹೊಸ ಹೊಸ ಸಮಸ್ಯೆಗಳೂ ವಿರೋಧಗಳೂ ಬರಲು ಆರಂಭಿಸಿದುವು.

ಚಲನಚಿತ್ರದ ಪ್ರೇಕ್ಷಕರಿಗೆ ರುಚಿಸುವಂತೆ ಹಾಡಬಲ್ಲ ಹಿನ್ನೆಲೆ ಗಾಯಕರು ಕೆಲವೇ ಮಂದಿ ಇದ್ದುದರಿಂದ ಎಲ್ಲಾ ನಿರ್ಮಾಪಕರೂ ಅವರ ಬೆನ್ನೇ ಹತ್ತಿದ್ದರು. ಇದರಿಂದಾಗಿ ಎಲ್ಲಾ ನಟಿಯರೂ ಲತಾ ಮಂಗೇಶ್ಕರ್ ಅಥವಾ ಆಶಾ ಭೋನ್ಸ್ಲೆಯ ಧ್ವನಿಯಲ್ಲೂ ಎಲ್ಲಾ ನಟರೂ ಮಹಮದ್ ರಫಿ ಅಥವಾ ಕಿಶೋರ್ ಕುಮಾರ್ ಧ್ವನಿಯಲ್ಲೂ ಹಾಡುವವರಾಗಿಬಿಟ್ಟರು. ಇದು ಅಷ್ಟು ನೈಜಿಕವಾಗಿರಲಿಲ್ಲ. ಉದಾಹರಣೆಗೆ ಹೇಳುವುದಾದರೆ ದಿಲೀಪ್ ಕುಮಾರ್ ಮತ್ತು ರಾಜ್‌ಕಪೂರ್ ಇಬ್ಬರೂ ಒಂದೇ ಧ್ವನಿಯಲ್ಲಿ ಹಾಡಲು ಹೇಗೆ ಸಾಧ್ಯ? ಪ್ರೆಕ್ಷಕರೂ ಸಹ ಒಂದೇ ಧ್ವನಿಯನ್ನು ಕೇಳಿ ಕೇಳಿ ಬೇಸತ್ತು ಹೋದರು. ಆದರೆ ಈ ವ್ಯಾಪಾರೀ ನಿಯಮದಲ್ಲಿ ಎಲ್ಲೆಲ್ಲೂ ಸ್ಪರ್ಧೆ ಇರುವಾಗ ಜನಪ್ರಿಯ ಗಾಯಕರ ಬೆನ್ನು ಹತ್ತುವ ನಿರ್ಮಾಪಕರುಗಳನ್ನು ದೂರುವ ಹಾಗಿಲ್ಲ.

ಈ ಚಲನಚಿತ್ರ ಧ್ವನಿ ಪ್ರಪಂಚದಲ್ಲಿ ಹಿನ್ನೆಲೆ ಗಾಯನಕ್ಕೆ ವಿರುದ್ಧವಾದ ಮತ್ತೊಂದು ಶಬ್ದ ಪ್ರಕರಣದ ಬೆಳವಣಿಗೆಯಾಯಿತು.

ಈಚೆಗೆ ಜನಪ್ರಿಯವಾಗಿರುವ ಹೊರಾಂಗಣ ಚಿತ್ರೀಕರಣದಲ್ಲಿ ಶಬ್ದಾಭೇದ್ಯ (ಸೌಂಡ್ ಪ್ರೂಫ್) ಸ್ಟುಡಿಯೋಗಳಿಂದ ಹೊರಗೆ ಧ್ವನಿಮುದ್ರಣ ಮಾಡಬೇಕಾಗುತ್ತದೆ. ಇದು ಹೊಸ ಸಮಸ್ಯೆಗಳಿಗೆ ಎಡೆ ಮಾಡಿಕೊಟ್ಟಿತು. ನಟನಟಿಯರ ಧ್ವನಿಯ ಜೊತೆಗೆ ಹೊರಗಡೆಯಿಂದ ಬರುವ ಗುಜುಗುಜು ಸದ್ದು, ರೈಲಿನ ಗಡಗಡ ಸದ್ದು, ಕಾರಿನ ಹಾರನ್ ಶಬ್ದ, ಛಾಯಾಗ್ರಹಣ ಯಂತ್ರ ನಡೆಸಲು ಇರುವ ಜನರೇಟರಿನ ಗಿರ್ರೆಂಬ ಶಬ್ಧ ಮತ್ತು ಛಾಯಾಗ್ರಹಣ ಯಂತ್ರದ ಸದ್ದೂ ಕೂಡಿ ನಟರ ಧ್ವನಿಗಳಿಗೆ ಅಡಚಣೆಯಾಗುತ್ತದೆ.



ಭಾರತ-ಸೋವಿಯತ್ ಸಹಕಾರದಲ್ಲಿ ನಿರ್ಮಿತವಾದ ಪರದೇಸಿ ಚಿತ್ರದ ಒಂದು ದೃಶ್ಯ



ನಟರ ಧ್ವನಿಗಳ ಜೊತೆ ಸೇರಿ, ಅವರ ಧ್ವನಿಗಳನ್ನು ಹಾಳುಮಾಡುವ ಈ ಬೇರೆ ಬೇರೆ ಶಬ್ದಗಳನ್ನು ಮೂಲ ಧ್ವನಿಪಥದಿಂದ ಅಳಿಸುವುದು ಸಾಧ್ಯವಿಲ್ಲ. ಆದರೆ ಬೇರೆಯೇ ಆದ ಒಂದು ರೀತಿಯಿಂದ — 'ನಂತರ ಧ್ವನಿ ಹೊಂದಾಣಿಕೆ' (ಪೋಸ್ಟ್ ಸಿಂಕ್ರೊನೈಸಿಂಗ್) ಅಥವಾ ಧ್ವನಿ ಹೊಂದಾಣಿಕೆ (ಡಬ್ಬಿಂಗ್) ಯಿಂದ — ಬರೀ ನಟನಟಿಯರ ಸಂಭಾಷಣೆಗಳ ಧ್ವನಿಪಥವನ್ನು ತಯಾರಿಸಲು ಸಾಧ್ಯವಿದೆ.

ಸ್ಟೂಡಿಯೋವಿನ ಪ್ರದರ್ಶನ ಮಂದಿರದಲ್ಲಿ ಧ್ವನಿ ಸಮೇತ ಇರುವ ಮೂಲ ಪಟಲವನ್ನು ಪ್ರದರ್ಶಿಸ ಲಾಗುತ್ತದೆ. ಇದು ನಟನಟಿಯರು ಆಡಿರುವ ಮಾತುಗಳು ಮತ್ತು ರೀತಿಯನ್ನು ಅವರು ನೋಡಿ ಕೊಳ್ಳಲು ನೆರವಾಗುತ್ತದೆ. ಧ್ವನಿಹೊಂದಾಣಿಕೆ ಮಾಡುವಾಗ ಪೂರಾ ಚಿತ್ರವನ್ನಾಗಲಿ ಅಥವಾ ಒಂದು ರೀಲನ್ನಾಗಲೀ ತೋರಿಸುವುದಿಲ್ಲ. ಒಂದೊಂದು ಸನ್ನಿವೇಶದಲ್ಲಿ ಬರುವ ಧ್ವನಿ ಹೊಂದಾಣಿಕೆ ಮಾಡುವ ಜಾಗಗಳನ್ನು ಮಾತ್ರ ಕತ್ತರಿಸಿ ಚಿಕ್ಕ ಚಿಕ್ಕ ಕುಣಿಕೆ (ಲೂಪ್) ಗಳಾಗಿ ಮಾಡುತ್ತಾರೆ. ಈ ಒಂದೊಂದು ಕುಣಿಕೆಯನ್ನು ನಟ ನಟಿಯರಿಗೆ ಅಭ್ಯಾಸ ಮಾಡಲು ಅನುಕೂಲವಾಗುವಂತೆ ಮತ್ತೆ ಮತ್ತೆ ಪ್ರದರ್ಶಿಸುತ್ತಾರೆ. ಅನಂತರ ಧ್ವನಿಯನ್ನು ಧ್ವನಿವರ್ಧಕ ಯಂತ್ರದಿಂದ ಬೇರ್ಪಡಿಸಿ ನಟರ ಕಿವಿಗೆ ಶ್ರವಣಯಂತ್ರ (ಇಯರ್ ಫೋನ್) ಕೊಡುತ್ತಾರೆ. ನಟರ ಮುಂದೆ ಒಂದು ಧ್ವನಿ ಗ್ರಹಣ ಯಂತ್ರವಿರುತ್ತದೆ. ನಟರು ತಮ್ಮ ತುಟಿ ಚಲನೆ ಯನ್ನು ಸೂಕ್ಷ್ಮವಾಗಿ ಗಮನಿಸಿ ಸಂಭಾಷಣೆಗಳನ್ನು ಹೇಳುತ್ತಾರೆ. ಇದರಿಂದ ಹಳೆಯ ಗೊಂದಲದ ಧ್ವನಿ ಪಥಕ್ಕೆ ಬದಲಾಗಿ ಹೊಸದಾದ ಸ್ಪಷ್ಟವಾದ ಧ್ವನಿ ಪಥ ದೊರಕುತ್ತದೆ.

ಇದೇ ರೀತಿ ಯಾವುದಾದರೂ ನಟನಟಿಯರ ಧ್ವನಿಯಲ್ಲಿ ಏನಾದರೂ ಕೊರತೆ ಕಂಡುಬಂದರೆ ಅದಕ್ಕೆ ಬೇರೆಯವರ ಧ್ವನಿ ಉಪಯೋಗಿಸಿ 'ಧ್ವನಿ ಹೊಂದಾಣಿಕೆ' ಮಾಡಬಹುದು. ಒಂದು ಸಲ ಮೀನಾಕುಮಾರಿ ಸತ್ತನಂತರ ಅವಳ ಬಾಕಿ ಉಳಿದ ಚಿತ್ರಗಳಿಗೆ ಅವಳ ಧ್ವನಿಯನ್ನೇ ಹೋಲುವ ಬೇರೊಬ್ಬ ಧ್ವನಿ ನೀಡುವ ಕಲಾವಿದೆ (ಡಬ್ಬಿಂಗ್ ಆರ್ಟಿಸ್ಟ್) ಯನ್ನು ಬಳಸಿಕೊಂಡು ಚಿತ್ರವನ್ನು ಪೂರೈಸಿದರು.

ಇದೇ ರೀತಿಯಲ್ಲಿ ಒಂದು ಭಾಷೆಯ ಚಿತ್ರವನ್ನು ಬೇರೊಂದು ಭಾಷೆಗೆ ಧ್ವನಿ ಹೊಂದಾಣಿಕೆ ಮಾಡಬಹುದು. ಆದರೆ ಅನುವಾದ ಮಾಡುವಾಗ ಸಂಭಾಷಣೆ ಗಳನ್ನು ಇನ್ನೊಂದು ಭಾಷೆಯ ತುಟಿ ಚಲನೆಗೆ ಹೊಂದುವಂತೆ ಬರೆಯಬೇಕು.

'ಆವಾರ' ಚಿತ್ರವನ್ನು ರಷ್ಯನ್ ಭಾಷೆಗೆ ಧ್ವನಿ ಹೊಂದಾಣಿಕೆ ಮಾಡಲಾಯಿತು. ರಾಜಕಪೂರ್, ನರ್ಗೀಸ್ ಮತ್ತು ಪೃಥ್ವಿರಾಜ್ ಕಪೂರ್ ರಷ್ಯನ್ ಭಾಷೆ ಮಾತ ನಾಡುತ್ತಿದ್ದಂತೆ ಕಾಣಿಸುತ್ತಿದ್ದಲ್ಲದೆ ಧ್ವನಿ ಹೊಂದಾಣಿಕೆ ನೀಡಿದ ರಷ್ಯನ್ ಕಲಾವಿದರ ಧ್ವನಿಗಳೂ ಸಹ ಮೂಲ ನಟನಟಿಯರ ಧ್ವನಿಗೆ ಮೋಳೈಸುತ್ತಿದ್ದುವು.

ಸಿನೆಮಾ ಬರೀ ತೆರೆಯ ಮೇಲೆ ಕಾಣುವ ಇಂದ್ರಜಾಲವೊಂದೇ ಅಲ್ಲದೆ ಕಿವಿಯಿಂದ ಕೇಳುವ ಇಂದ್ರಜಾಲವೂ ಆಗಿದೆ. ಹಾಡಲು ಗೊತ್ತಿಲ್ಲದ ಒಬ್ಬ ಪ್ರಸಿದ್ಧ ನಟನ ಬಾಯಿಯಿಂದ ಸತ್ತು ಭೂತವಾಗಿರುವವರು ಹಾಡುತ್ತಿರುವಂತೆ ತೋರಿಸಬಹುದು. ಭಾರತೀಯ ನಟನಟಿಯರು ರಷ್ಯನ್ ಭಾಷೆ ಮಾತನಾಡುತ್ತಿ ರುವಂತೆಯೂ ತಮಿಳು ಭಾಷೆಯ ನಟನಟಿಯರು ಹಿಂದೀ ಭಾಷೆ ಮಾತನಾಡು ತ್ತಿರುವಂತೆಯೂ ತೋರಿಸಬಹುದು.



# ಚಿತ್ರದ ಗತಿ ಅಥವಾ ವೇಗ

ನೀವು ನಿಮ್ಮ ಸ್ಕೂಲಿನ ಮಾಸ ಪತ್ರಿಕೆಯನ್ನೋ ಅಥವಾ ದಿನ ಪತ್ರಿಕೆಯನ್ನೋ ತಿದ್ದುಪಡಿ ಮಾಡುವುದರ ಮೂಲಕ ಅದನ್ನು ಸಂಪಾದಿಸಿರಬಹುದು. ಅಥವಾ ಒಂದು ಪದ್ಯವನ್ನೋ, ಚುಟುಕವನ್ನೋ, ಒಂದು ಬರವಣಿಗೆಯನ್ನೋ, ಒಂದು ಚಿತ್ರವನ್ನೋ, ಒಂದು ಸಣ್ಣ ಕಥೆಯನ್ನೋ ಪತ್ರಿಕೆಯ ಸಂಪಾದಕರಿಗೆ ಕೊಟ್ಟಿದ್ದರೆ ನಿಮಗೆ ಸಂಪಾದನೆ (ಎಡಿಟಿಂಗ್) ಎಂಬುದರ ಅರ್ಥ ಹೇಳಬೇಕಾಗಿಲ್ಲ.

ಮೂಲತಃ ಚಲನಚಿತ್ರದ ಸಂಪಾದನೆಯೂ ಅದೇ ರೀತಿಯಾಗಿರುತ್ತದೆ ಮತ್ತು ಇದು ಚಲನಚಿತ್ರ ನಿರ್ಮಾಣ ಕಾರ್ಯದಲ್ಲಿ ಬಹಳ ಮುಖ್ಯವಾದ ಘಟ್ಟ.

ಶಾಲೆಯ ಮಾಸಪತ್ರಿಕೆ ಅಥವಾ ದಿನಪತ್ರಿಕೆಯನ್ನು ರೂಪಿಸುವಾಗ ಸಂಪಾದಕನಾದವನು ಸಮಾಚಾರಗಳು, ಲೇಖನಗಳು, ಕವಿತೆಗಳು ಮತ್ತು ಅನೇಕ ಸಾಹಿತ್ಯಿಕ ವಿಷಯಗಳು, ವ್ಯಂಗ್ಯ ಚಿತ್ರಗಳು, ಜಾಹೀರಾತುಗಳು ಇವುಗಳ ಸಂಗ್ರಹವನ್ನೆಲ್ಲಾ ತನ್ನ ಮೇಲ್ವಿಚಾರಣೆಗೆ ತೆಗೆದುಕೊಂಡು ಅಂತಿಮ ರೂಪ ನೀಡುತ್ತಾನೆ. ಆದರೆ ಪ್ರತಿಯೊಂದು ಸಮಾಚಾರ, ಕಥೆ, ಕವಿತೆ ಅಥವಾ ಜಾಹೀರಾತು ತನ್ನದೇ ಆದ ಒಂದು ಅಸ್ತಿತ್ವವನ್ನು ಪಡೆದಿರುತ್ತದೆ. ತಮ್ಮ ಅರ್ಹತೆಗೆ ತಕ್ಕಹಾಗೆ ಗೌರವಕ್ಕೆ ಪ್ರಾಪ್ತವಾಗುತ್ತವೆ.



ಚಲನಚಿತ್ರದ ಸಂಪಾದನೆ

ಚಲನಚಿತ್ರಗಳಲ್ಲಿ ದೃಶ್ಯಗ್ರಹಣ, ಚಿತ್ರ, ಧ್ವನಿಪಥ ಇವನ್ನೆಲ್ಲಾ ಸಂಪಾದಕನು ಒಟ್ಟಿಗೆ ಸೇರಿಸಿ ನಿರ್ದೇಶಕನ, ಲೇಖಕನ ಉದ್ದೇಶದ ಅರ್ಥ ಕೊಡುವವರೆಗೆ ಅವುಗಳಿಗೇನೂ ಅರ್ಥವಿರುವುದಿಲ್ಲ. ದೃಶ್ಯಗ್ರಹಣಕ್ಕೆ ದೃಶ್ಯಗ್ರಹಣ ಜೋಡಿಸಿ, ದೃಶ್ಯದಿಂದ ಮತ್ತೊಂದು ದೃಶ್ಯಕ್ಕೆ ಸಂಭಾಷಣೆಗಳನ್ನು ಸರಿಹೊಂದಿಸಿ, ಉಚಿತವಾದ ಶಬ್ದಗಳನ್ನು ಮೂಕ ಚಿತ್ರಕ್ಕೆ ಸೇರಿಸುವವನು ಸಂಪಾದಕ. ಇದಾದ ನಂತರವೇ ಚಿತ್ರಕ್ಕೆ ಒಂದು ಕಲಾಪೂರ್ಣ ಅರ್ಥ ಬರುತ್ತದೆ ಮತ್ತು ಜನರ ಆಸಕ್ತಿಯನ್ನು ಹೆಚ್ಚಿಸುತ್ತದೆ. ಇಲ್ಲದಿದ್ದರೆ ಚಲನಚಿತ್ರ ಬರೀ ಅರ್ಥವಿಲ್ಲದ ಚಿತ್ರ ಮತ್ತು ಧ್ವನಿಗಳ ಮಿಶ್ರಣ ಅಷ್ಟೇ.

ಚಿತ್ರಿತವಾದ ಹಾಡುಗಳಿಗೆ, ಕುಣಿತಗಳಿಗೆ ಸಂಪಾದಕ ಅಥವಾ ಅವನ ಸಹಾಯಕರು ನಟನಟಿಯರ ಅಂಗಚಲನೆಗಳನ್ನು, ಅಭಿನಯವನ್ನು, ಭಾವಗಳನ್ನು ಮೊದಲೇ ಧ್ವನಿ ಮುದ್ರಿತವಾದ ಹಾಡು ಅಥವಾ ಧ್ವನಿಪಥಕ್ಕೆ ಸರಿಹೊಂದಿಸಿ ನಿಮ್ಮ ಅಚ್ಚುಮೆಚ್ಚಿನ ನಟನಟಿಯರೇ ಹಾಡುತ್ತಿರುವಂತೆಯೂ ತಾಳಕ್ಕೆ ತಕ್ಕ ಹಾಗೆ ಕುಣಿಯುತ್ತಿರುವಂತೆಯೂ ಕಾಣುವ ಹಾಗೆ ಮಾಡುತ್ತಾರೆ.

ಒಬ್ಬ ಬುದ್ಧಿವಂತ ಮತ್ತು ಚುರುಕು ಬುದ್ಧಿಯ ಸಂಪಾದಕನ ಸಹಾಯವಿಲ್ಲದೆ ನಿರ್ದೇಶಕನಾದವನು ತನ್ನ ಚಿತ್ರ ಕೆಟ್ಟದ್ದೋ ಒಳ್ಳೆಯದೋ, ಪ್ರೋತ್ಸಾಹ ಸಿಕ್ಕು ವುದೋ ಇಲ್ಲವೋ ಎಂಬ ತನ್ನ ಕಟ್ಟಕಡೆಯ ನಿರ್ಣಯ ಕೊಡುವಂಥ ಯಾವ ಚಿತ್ರವನ್ನೂ ತಯಾರಿಸಲಾರ.

ಚಲನಚಿತ್ರ ನೋಡುತ್ತಿರುವಾಗ ಕೆಲವು ಸಲ ಚಿತ್ರದ ಗತಿ ಅಥವಾ ಒಂದರ ನಂತರ ಒಂದಾಗಿ ಬರುವ ದೃಶ್ಯಗಳ ಓಟ ಬಹಳ ವೇಗವಾಗಿಯೂ ಉತ್ತೇಜಕವಾಗಿಯೂ ಇದೆ ಅನ್ನಿಸುತ್ತದೆ. ಮತ್ತೊಮ್ಮೆ ಗತಿ ಬಹಳ ನಿಧಾನ ವಾಯಿತೇನೋ ಎಂದನಿಸುತ್ತದೆ. ಅದು ಏಕೆ ಎಂದು ವಿಶ್ಲೇಷಿಸಿ ಹೇಳುವುದು ನಿಮಗೆ ಸಾಧ್ಯವಾಗದಿರಬಹುದು. ಚಿತ್ರದ ಈ ವೇಗ ಸಂಪಾದಕನ ಯೋಗ್ಯತೆ ಮತ್ತು ಜಾಣ್ಮೆಯನ್ನು ಅವಲಂಬಿಸಿರುತ್ತದೆ. ಚಿತ್ರದ ಗತಿ ವೀಕ್ಷಕರ ಮನಸ್ಸನ್ನು ಹಿಡಿಯುವಂತಾಗುವುದು ಸಂಪಾದಕನ ತಿಳುವಳಿಕೆ ಮತ್ತು ಅನುಭವಗಳನ್ನು ಆಧರಿಸಿರುತ್ತದೆ. ಒಬ್ಬ ಶಸ್ತ್ರ ಚಿಕಿತ್ಸಕನು ರೋಗಿಯನ್ನು ಉಳಿಸಲು ಅವನ ದೇಹದಿಂದ ಯಾವುದಾದರೂ ಭಾಗವನ್ನೋ ತುಂಡನ್ನೋ ಕತ್ತರಿಸಿ ಬಿಸಾಡುವಂತೆ ಚಲನಚಿತ್ರ ಸಂಪಾದಕನು ಬೇಸರ ತರುವಂಥ ಅಥವಾ ಅನಾವಶ್ಯಕವೆನಿಸಿದ ದೃಶ್ಯಗಳನ್ನು ಮೊಟಕುಗೊಳಿಸುತ್ತಾನೆ ಅಥವಾ ಕತ್ತರಿಸಿ ಬಿಸಾಡುತ್ತಾನೆ.

ನಿರ್ದೇಶಕನು ಹಡಗಿನ ಕ್ಯಾಪ್ಟನ್ ಇದ್ದ ಹಾಗೆ. ಪೂರಾ ಚಿತ್ರ ಅವನ ಸೃಷ್ಟಿಯೇ ಆದ್ದರಿಂದ ಒಂದು ವಿಧವಾಗಿ ಇದು ನಿಜವೇ. ಹಡಗಿನ ಕ್ಯಾಪ್ಟನ್ನಿನ ಹಾಗೆ ತಾನು ಯಾವ ದಿಕ್ಕಿನಲ್ಲಿ ಮುಂದುವರೆಯುತ್ತಿದ್ದೇನೆಂದು ಅವನಿಗೆ ಚೆನ್ನಾಗಿ ಗೊತ್ತು. ನಿರ್ದೇಶಕ ಕ್ಯಾಪ್ಟನ್ ಆದರೆ ಸಂಪಾದಕ ಅವನ ಮುಖ್ಯ ಇಂಜನೀಯರ್ ಇದ್ದ ಹಾಗೆ. ಅವನ ಇಚ್ಛೆಯ ಪ್ರಕಾರದ ಗತಿಯಲ್ಲಿ ಹಡಗು ಹೋಗುತ್ತದೆ. ಅವನಿಲ್ಲದಿದ್ದರೆ ಹಡಗಿಗೆ ತನ್ನ ದಾರಿಯಲ್ಲಿ ಚಲಿಸುವುದಕ್ಕೆ ಆಗು ವುದಿಲ್ಲ. ಅಂತೆಯೇ ಚಲನಚಿತ್ರ ಸಂಪಾದಕನೂ ಸಹ. ನಿರ್ದೇಶಕ ಮತ್ತು

ಲೇಖಕರು ಚರ್ಚಿಸಿ ನಿರ್ಧರಿಸಿರುವ ದಿಕ್ಕಿನಲ್ಲಿ ಅವನು ಹಡಗನ್ನು ನಡೆಸುತ್ತಾ ಹೋಗುತ್ತಾನೆ. ಆದ್ದರಿಂದಲೇ ಕೆಲವು ಪ್ರಖ್ಯಾತ ಭಾರತೀಯ ಮತ್ತು ವಿದೇಶೀಯ ನಿರ್ದೇಶಕರುಗಳು ಸ್ವತಃ ಸಂಪಾದಕರಾಗಿರುತ್ತಾರೆ. ಅಥವಾ ಸಂಪಾದಕನ ಜೊತೆ ನಿಕಟ ಸಂಪರ್ಕ ಹೊಂದಿರುತ್ತಾರೆ.

ಚಲನಚಿತ್ರಗಳ ಆಕಾರ, ಆಕೃತಿ ಮತ್ತು ಕೌಶಲ್ಯಗಳು ತಾಂತ್ರಿಕವಾಗಿ ಮುಂದುವರೆಯುತ್ತಿದ್ದಂತೆ ಸಂಪಾದಕನ ಕೆಲಸ ಬಹಳ ಕಷ್ಟವೂ ತೊಡಕಿನದೂ ಆಗುತ್ತಿದೆ. ಹತ್ತನೇ ದೃಶ್ಯಗ್ರಹಣದ ನಂತರ ಹನ್ನೊಂದನೇ ದೃಶ್ಯಗ್ರಹಣ ಅಥವಾ ನಲವತ್ತನಾಲ್ಕನೆಯದರ ನಂತರ ನಲವತ್ತೈದನೇ ದೃಶ್ಯಗ್ರಹಣ ಜೋಡಿಸುವುದಷ್ಟೇ ಸಂಪಾದಕನ ಕೆಲಸವಲ್ಲ. ಹೊಸ ಶೈಲಿಯ ನಿರ್ದೇಶನ ಮತ್ತು ಸಂಪಾದನೆಗೆ ಅಧಿಕವಾದ ಕಲ್ಪನೆ, ಕೌಶಲ್ಯ, ವೈವಿಧ್ಯತೆಗಳು ಅಗತ್ಯವಾಗಿವೆ.

ಈಗಿನ ನಿರ್ದೇಶಕರು ಮತ್ತು ಲೇಖಕರುಗಳಿಗೆ ನೇರವಾಗಿ, ಸರಳವಾಗಿ ಒಂದೇ ಕ್ರಮದಲ್ಲಿ ಕಥೆ ಹೇಳುವುದರಲ್ಲಿ ತೃಪ್ತಿಯಾಗುವುದಿಲ್ಲ. ಹಿಂದೆ ನಡೆದದ್ದು, ಮುಂದೆ

ಮರುಭೂಮಿಯಲ್ಲಿ ರಾತ್ರಿಯಲ್ಲಿ ಚಿತ್ರೀಕರಣ



ನಡೆಯಬಹುದಾದ್ದು ಎಲ್ಲವನ್ನೂ ಕಲಸುಮೇಲೋಗರ ಮಾಡುವುದರಲ್ಲಿ ಅವರು ಪ್ರವೀಣರು. ಅಭಿನಯವನ್ನಲ್ಲದೆ ಪಾತ್ರಗಳ ಕಲ್ಪನೆ ಮತ್ತು ಭಾವನೆಗಳನ್ನು ಅವರು ಚಿತ್ರಿಸುತ್ತಾರೆ. ಹಿಂದೆ ನಡೆದ ಘಟನೆಗಳನ್ನು ಕಥೆಯ ಮಧ್ಯದಲ್ಲಿ ತರುವುದು (ಫ್ಲ್ಯಾಷ್ ಬ್ಯಾಕ್) ಮತ್ತು ಮುಂದೆ ನಡೆಯಬಹುದಾದ ಘಟನೆ (ಫ್ಲ್ಯಾಷ್ ಫಾರ್‌ವರ್ಡ್) ಗಳ ಚಿತ್ರೀಕರಣವೂ ಇರುತ್ತವೆ. ಸಂಪಾದಕ ಅಥವಾ ನಿರ್ದೇಶಕ-ಸಂಪಾದಕ ತನ್ನ ತಿಳುವಳಿಕೆ ಮತ್ತು ಅನುಭವಗಳಷ್ಟನ್ನೇ ಅಲ್ಲದೆ ತನ್ನ ಕಲ್ಪನಾ ಶಕ್ತಿ ಮತ್ತು ಸ್ಫೂರ್ತಿಯನ್ನೂ ಉಪಯೋಗಿಸಬೇಕಾಗುತ್ತದೆ.

ಇತ್ತೀಚಿನ ಹೊಸ ಚಲನಚಿತ್ರಗಳ ಸಂಪಾದನೆ 'ಸರಣಿ ಚಿತ್ರ' (ಮಾನ್‌ಟೇಜ್) ಎಂಬುವ ಒಂದು ಹೊಸ ಸಂಪಾದನಾ ಕೌಶಲ್ಯಕ್ಕೆ ಹತ್ತಿರವಾಗುತ್ತಿದೆ. ಇದನ್ನು ಪ್ರಸಿದ್ಧ ರಷ್ಯನ್ ನಿರ್ದೇಶಕ ಸರ್ಗೆ ಐನ್‌ಸ್ಟೀನ್ ತನ್ನ ಚಿತ್ರದ ಕೆಲವು ಪರಿಣಾಮಕಾರಿ ದೃಶ್ಯಗಳಿಗೆ ಉಪಯೋಗಿಸಿದ್ದನು. ಒಂದು ವಿಶಿಷ್ಟ ಸನ್ನಿವೇಶದಲ್ಲಿ ಕವಿತಾ ಪೂರ್ಣ, ನಾಟಕೀಯ ಮತ್ತು ಸಾಹಿತ್ಯದ ಅರ್ಥವನ್ನು ಕೊಡಲು ಒಂದಕ್ಕೊಂದು ಸಂಬಂಧ ವಿಲ್ಲದ ಎರಡು ದೃಶ್ಯಗಳನ್ನು ಜೋಡಿಸುವುದೇ ಸರಣಿ ಚಿತ್ರದ ಕೌಶಲ್ಯ. ಸರಣಿ ಚಿತ್ರದ ಉತ್ತಮ ಉದಾಹರಣೆಯೆಂದರೆ ಚಾರ್ಲಿ ಚಾಪ್ಲಿನ್ನಿನ 'ಮಾಡ್ರ್ನ ಟೈಮ್ಸ್' ಚಿತ್ರದ ಮೊದಲನೇ ಎರಡು ದೃಶ್ಯಗ್ರಹಣಗಳು. ಮೊದಲನೇ ದೃಶ್ಯಗ್ರಹಣದಲ್ಲಿ ಕುರಿಗಳ ಗುಂಪೊಂದು ತಲೆತಗ್ಗಿಸಿ ನಿಧಾನವಾಗಿ ಆವರಣದೊಳಕ್ಕೆ ಹೋಗುತ್ತಿ ರುವುದು. ಎರಡನೇ ದೃಶ್ಯಗ್ರಹಣದಲ್ಲಿ ಕಾರ್ಖಾನೆಯ ಕೆಲಸಗಾರರ ಗುಂಪೊಂದು ತಲೆತಗ್ಗಿಸಿಕೊಂಡು ನಿಧಾನವಾಗಿ ಕಾರ್ಖಾನೆಯ ಆವರಣದೊಳಕ್ಕೆ ಹೋಗುತ್ತಿರು ವುದು. ಇವೆರಡೂ ದೃಶ್ಯಗ್ರಹಣಗಳಿಗೂ ತಮ್ಮೊಳಗೆ ಏನೂ ಸಂಬಂಧವಿಲ್ಲದಿದ್ದರೂ ಎರಡನ್ನು ಒಟ್ಟಿಗೆ ಇಟ್ಟಾಗ ಒಂದು ನಿರ್ದಿಷ್ಟವಾದ ಅರ್ಥ ಬರುತ್ತದೆ — ಆಧುನಿಕ ಕಾಲದ ಮಾನವ ಕುರಿಗಳ ಹಾಗೆ ಆಗಿದ್ದಾನೆ.

ಉರಿಯುತ್ತಿರುವ ದೀಪ ಯಾರಾದರೂ ಸತ್ತಾಗ ಆರಿಹೋಗುವಂಥ ಸಂಕೇತ ಗಳು ಭಾರತೀಯ ಚಿತ್ರಗಳಲ್ಲಿ ಬಳಕೆಯಲ್ಲಿರುವ ಸರಣಿ ಚಿತ್ರಗಳು. ಬುದ್ಧಿವಂತಿಕೆಯ ಒಂದು ಸರಣಿ ಚಿತ್ರದ ಉದಾಹರಣೆ ಎಂದರೆ ಹೊಟ್ಟೆ ಪಾಡಿಗೆ ಗಾಳಿಪಟಗಳನ್ನು ಮಾರುತ್ತಿದ್ದ ಒಬ್ಬ ಕವಿ ಸತ್ತಾಗ ಒಂದು ಬಿಳೀ ಗಾಳಿಪಟ ನೀಲಿ ಆಕಾಶದಲ್ಲಿ ಎತ್ತರದಲ್ಲಿ ಹಾರಾಡುತ್ತಿರುವುದು. ಮೇಲಕ್ಕೇರುತ್ತಿರುವ ಗಾಳಿಪಟ ಸತ್ತವನ ಆತ್ಮ ಸ್ವರ್ಗಕ್ಕೇರುತ್ತಿರುವುದನ್ನು ಸಂಕೇತಿಸುತ್ತದೆ. ಇದು ಬಹಳ ಸರಳವಾದ, ಪರಿಣಾಮ ಕಾರಿಯಾದ ಸಿನಿಮಾ ರಂಗದ ಉಪಮೆ.

# ಬಹುಮಂದಿಗೆ ಸಂಗೀತ

ಬೊಂಬಾಯಿ ನೋಡಲು ಬಂದವರೆಲ್ಲಾ ಚಲನಚಿತ್ರ ಸ್ಟೂಡಿಯೋವೊಂದನ್ನು ನೋಡಿ ಹಾಡಿನ ಧ್ವನಿ ಮುದ್ರಣವೊಂದನ್ನು ವೀಕ್ಷಿಸಲು ಇಷ್ಟಪಡುತ್ತಾರೆ. ನಿಮ್ಮನ್ನು ಆಗಲೇ ಸ್ಟೂಡಿಯೋ ಒಳಕ್ಕೆ ಕರೆದುಕೊಂಡು ಹೋಗಿದ್ದಾಗಿದೆ. ಈಗ ಧ್ವನಿ ಮುದ್ರಣ ಮಾಡುವ ಸ್ಥಳಕ್ಕೆ (ರೆಕಾರ್ಡಿಂಗ್ ಥಿಯೇಟರ್) ಹೋಗೋಣ.

ದೇಶದಲ್ಲೇ ಉತ್ತಮವೆನಿಸಿಕೊಂಡ ಐದಾರು ಧ್ವನಿ ಮುದ್ರಣ ಥಿಯೇಟರುಗಳು ಬೊಂಬಾಯಿನಲ್ಲಿ ಇವೆ. ಆದ್ದರಿಂದಲೇ ಮದ್ರಾಸು ಕಲ್ಕತ್ತಾಗಳಿಂದ ಕೂಡ ನಿರ್ಮಾಪಕರುಗಳು ತಮ್ಮ ಚಿತ್ರಗಳಿಗೆ — ಮುಖ್ಯವಾಗಿ ಹಿಂದೀ ಚಿತ್ರಗಳಿಗೆ — ಮುದ್ರಿಕೆಗೆ ಬೊಂಬಾಯಿಗೆ ಹೋಗುತ್ತಾರೆ.

ಧ್ವನಿ ಮುದ್ರಣ ಥಿಯೇಟರ್‌ಗೆ ಹೋಗುತ್ತಿದ್ದಂತೆಯೇ ಸ್ಟೂಡಿಯೋವಿನಲ್ಲಿ ನೀವು ನೋಡದಂತಹ ಜನ ಸಮೂಹ ಕಂಡುಬರುತ್ತದೆ. ಸುಮಾರು ನೂರು ಜನ ಸಂಗೀತಗಾರರು ವಿವಿಧ ಬಗೆಯ ವಾದ್ಯಗಳೊಂದಿಗೆ (ಚಿಕ್ಕ ಕೊಳಲಿನಿಂದ ಹಿಡಿದು ದೊಡ್ಡ ಪಿಯಾನೋವರೆಗೆ) ಹಾಲಿನಲ್ಲಿ ಇರುತ್ತಾರೆ. ಪಾಶ್ಚಿಮಾತ್ಯ ಸಂಗೀತ ಪದ್ಧತಿಯಲ್ಲಿ ಬರೆದ ಸ್ವರರಚನೆ ಎಲ್ಲರ ಎದುರಿನಲ್ಲೂ ಒಂದೊಂದು ಪೀಠದ ಮೇಲೆ ಇರುತ್ತದೆ.

← ಸಮೀಪದಿಂದ ಚಿತ್ರೀಕರಣ

ನಾಲ್ಕು ಅಥವಾ ಐದು ಧ್ವನಿಗ್ರಹಣ ಯಂತ್ರಗಳನ್ನು ಬೇರೆ ಬೇರೆ ಕೋನಗಳಲ್ಲಿ, ಬೇರೆ ಬೇರೆ ವಾದ್ಯಗಳ ಮುಂದೆ ಹೆಚ್ಚು ಪರಿಣಾಮಕಾರಿಯಾಗಿ ಪ್ರತಿಧ್ವನಿತವಾಗು ವಂತೆ ಜೋಡಿಸಿರುತ್ತಾರೆ.

ಈ ವಾದ್ಯಗಳಲ್ಲಿ ಭಾರತೀಯ ವಾದ್ಯಗಳಾದ ಸಾರಂಗಿ, ಸಿತಾರ್, ತಬಲ, ಜಲತರಂಗಗಳೂ ಇರುತ್ತವೆ. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಪಾಶ್ಚಿಮಾತ್ಯ ವಾದ್ಯ ಗಳಾದ ಬ್ಯಾಂಗೋ, ಗಿಟಾರ್, ಪಿಯಾನೋ, ಪಿಟೀಲು, ಆರ್‌ಗನ್, ಕನ್‌ಸರ್‌ಟೀನಾ ಮುಂತಾದುವು ಇರುತ್ತವೆ.

ನಮ್ಮ ಚಿತ್ರಗಳಲ್ಲಿನ ಹಾಡುಗಳು ಹಿಂದೀ, ಉರ್ದು ಅಥವಾ ಯಾವುದೇ ಭಾರತೀಯ ಭಾಷೆಯಲ್ಲಿದ್ದರೂ, ರಾಗ-ಸಂಗೀತ ಸಾಮಾನ್ಯವಾಗಿ ಭಾರತೀಯವೇ ಆಗಿದ್ದರೂ ಪಾಶ್ಚಿಮಾತ್ಯ ಸಂಗೀತದ ಪ್ರಭಾವ ಅದರ ಮೇಲೆ ಹೆಚ್ಚಾಗುತ್ತಿರುವ ಕಾರಣ ಈಗ ನಿಮಗೆ ಅರಿವಾಗಿರಬಹುದು. ಈ ಭಾರತೀಯ ಮತ್ತು ಪಾಶ್ಚಿಮಾತ್ಯ ಸಂಗೀತದ ಬೆಸುಗೆ ಕೆಟ್ಟದ್ದೇನೂ ಅಲ್ಲ. ಇದು ಕೆಲವು ಚಿರಸ್ಮರಣೀಯ ಹಾಡು ಗಳನ್ನು ನಮಗೆ ಕೊಟ್ಟಿದೆ. ಇದೊಂದೇ ಅಲ್ಲದೆ, ಜನಪ್ರಿಯವಾದ ಪಾಶ್ಚಿಮಾತ್ಯ ಉಡುಗೆ ತೊಡುಗೆ, ಅವರ ಜೀವನದ ರೀತಿ, ಪಾಪ್ ಸಂಗೀತದ ಜೊತೆ ಸಾಮರಸ್ಯ ಇವೆಲ್ಲಾ ಔದ್ಯೋಗಿಕ ಪಟ್ಟಣಗಳ ಹೊಸ ಜೀವನದ ವೇಗ ಮತ್ತು ಮನೋಸ್ಥಿತಿಯನ್ನು ನಿಶ್ಚಯಿಸುತ್ತವೆ.

ಕೆಲವು ಸಂಗೀತ ನಿರ್ದೇಶಕರುಗಳು ಭಾರತೀಯ ವಾದ್ಯಗಳನ್ನೇ ಬಳಸಿ, ಶಾಸ್ತ್ರೀಯ ರಾಗಗಳನ್ನೇ ಆರಿಸಿಕೊಂಡು ಸಂಗೀತ ನೀಡುತ್ತಾರೆ. ಆದರೆ ಹೆಚ್ಚು ಜನಪ್ರಿಯರಾದ ಸಂಗೀತ ನಿರ್ದೇಶಕರು ಭಾರತೀಯ ಮತ್ತು ಪಾಶ್ಚಿಮಾತ್ಯ ಸಂಗೀತಗಳನ್ನು ಬೆರೆಸಿ ಬೇರೆ ಬೇರೆ ರೀತಿಯಲ್ಲಿ ಪ್ರಯೋಗಿಸಲು ಇಷ್ಟ ಪಡುತ್ತಾರೆ. ಹೆಚ್ಚು ಜನಪ್ರಿಯವಾಗಿ ಯಶಸ್ಸು ಗಳಿಸಿದ ಸಂಗೀತ ನಿರ್ದೇಶಕರು ಸಂಗೀತಗಾರರ ಒಂದು ಸೈನ್ಯವನ್ನೇ ಹಾಡಿನ ಮುದ್ರಣಕ್ಕೆ ಉಪಯೋಗಿಸುತ್ತಾರೆ. ಅದು ಒಂದು ರೀತಿಯಲ್ಲಿ ಅವರ ಘನತೆಯ ಗುರುತೂ ಯಶಸ್ಸಿನ ಮುದ್ರೆಯೂ ಇದ್ದ ಹಾಗೆ.

ಹಾಲಿನ ಪಕ್ಕದಲ್ಲೇ ಎರಡು ಶಬ್ದಾಭೇದ್ಯ (ಸೌಂಡ್ ಪ್ರೂಫ್) ಕೋಣೆ ಇರುತ್ತವೆ. ಒಂದು ಕೋಣೆ ಹಾಡುವವರಿಗಾಗಿಯೇ ಮೀಸಲಾಗಿ ಇರುತ್ತದೆ. ಈ ಕೋಣೆಯಿಂದಲೇ ಲತಾ ಮಂಗೇಶ್ಕರ್, ಆಶಾ ಬೋಸ್ಲೆ, ತಲತ್ ಮಹಮ್ಮದ್, ಮನ್ನಾಡೆ ಮುಂತಾದ ಪ್ರಖ್ಯಾತ ಹಿನ್ನೆಲೆ ಗಾಯಕರು ಒಬ್ಬೊಬ್ಬರಾಗಿ



ರೆಕಾರ್ಡಿಂಗ್ ಥಿಯೇಟರ್ ಒಳಗೆ

ಜೊತೆಯಾಗಿ ಅಥವಾ ಸಮೂಹ ಗಾನವಾಗಿ ಹಾಡುತ್ತಾರೆ.

ಎರಡನೇ ಕೋಣೆಯಲ್ಲಿ ಧ್ವನಿಮುದ್ರಣ ಯಂತ್ರ (ರೆಕಾರ್ಡಿಂಗ್ ಮೆಷಿನ್) ವನ್ನು ಇಟ್ಟಿರುತ್ತಾರೆ ಮತ್ತು ಎಲ್ಲಾ ಧ್ವನಿಗ್ರಹಣ ಯಂತ್ರ (ಮೈಕ್ರೊಫೋನ್) ಗಳನ್ನೂ ಈ ಯಂತ್ರಕ್ಕೆ ಸಂಪರ್ಕಿಸಲಾಗುತ್ತದೆ. ಅನೇಕ ಸ್ವಿಚ್‌ಗಳೂ, ಹಿಡಿಗಳೂ ಇರುವ ಈ ಕೋಣೆಯಲ್ಲಿ ಧ್ವನಿಮುದ್ರಣಕಾರ (ರಿಕಾರ್ಡಿಸ್ಟ್)ನೂ ಅವನ ಸಹಾಯಕರೂ ಕುಳಿತಿರುತ್ತಾರೆ. ಎಲ್ಲಾ ಧ್ವನಿಗ್ರಹಣ ಯಂತ್ರಗಳಿಂದ ಬರುವ ಧ್ವನಿಗಳನ್ನು ಹೆಚ್ಚು ಕಡಿಮೆ ಮಾಡುವ ಕೆಲಸವನ್ನೇ ಕೆಲವರು ಮಾಡುತ್ತಾರೆ. ಒಮ್ಮೆ ಹಾಡುವವರ ಧ್ವನಿಗೂ, ಮತ್ತೊಮ್ಮೆ ವಾದ್ಯಗಳ (ತಬಲ, ಮೃದಂಗ) ಗತಿಗೂ ಮಹತ್ವ ಕೊಡುತ್ತಾರೆ. ಇವುಗಳೆರಡರ ಮಧ್ಯೆ ವಯಕ್ತಿಕವಾಗಿ ವಾದ್ಯಗಳಿಗೆ ಪ್ರಾಮುಖ್ಯತೆ ದೊರಕುತ್ತದೆ (ಸಾರಂಗಿ, ಕೊಳಲು, ಕ್ಲಾರಿಯೋನೆಟ್, ಸೆಕ್ಸಾಫೋನ್ ಅಥವಾ ಪಿಟೀಲು).

ವಾದ್ಯ ವೃಂದದವರಿಗೆ, ಹಾಡುವವರ ಧ್ವನಿಯ ಜೊತೆಗೆ, ತಮ್ಮ ವಾದ್ಯಗಳ ಧ್ವನಿಯನ್ನು ಮೇಳೈಸಲು, ಶಬ್ದಗಳು ಮತ್ತು ಸಂಗೀತ, ಇವೆರಡರ ಸಮ್ಮಿಳನವನ್ನು ಸಾಧಿಸಲು ಹಲವಾರು ಗಂಟೆಗಳ ಕಾಲ ಅಭ್ಯಾಸ ಮಾಡಬೇಕಾಗುತ್ತದೆ. ಧ್ವನಿ ಮುದ್ರಕರಿಗೂ ಧ್ವನಿ ಮುದ್ರಣ ಕೋಣೆಯಲ್ಲಿ ಧ್ವನಿ ವರ್ಧಕ ಯಂತ್ರದಿಂದ ಬರುತ್ತಿರುವ ಹಾಡುಗಳನ್ನು ಗಮನವಿಟ್ಟು ಕೇಳುತ್ತಿರುವ ಸಂಗೀತ ನಿರ್ದೇಶಕರಿಗೂ ಈ ಅಭ್ಯಾಸ ತೃಪ್ತಿಯಾಗಬೇಕು. ಆ ನಂತರವೇ ಧ್ವನಿ ಮುದ್ರಣ ಪ್ರಾರಂಭವಾಗು ತ್ತದೆ. ಮೊದಲನೇ ಸಲವೇ ಸ್ವೀಕೃತ ಭಾಗ (ಟೇಕ್) ವನ್ನು ತೃಪ್ತಿಕರವಾಗಿದೆ (ಓ.ಕೆ.) ಎಂದು ಹೇಳುವುದು ಬಹಳ ಅಪರೂಪ. ಸಾಧಾರಣವಾಗಿ ಓ.ಕೆ. ಎಂದು ಹೇಳಬೇಕಾದರೆ ಕಡೆ ಪಕ್ಷ ಐದಾರು ಟೇಕ್‌ಗಳಾದರೂ ಆಗಬೇಕು. ಈ ಧ್ವನಿ ಮುದ್ರಣಗಳನ್ನೆಲ್ಲಾ ದೊಡ್ಡ ಟೇಪ್ ರೆಕಾರ್ಡರುಗಳ ಮೇಲೆ ಮಾಡುವುದ ರಿಂದ ಎಷ್ಟು ಟೇಕ್‌ಗಳನ್ನು ತೆಗೆದುಕೊಂಡರೂ ಪರವಾಗಿಲ್ಲ. ಕೊನೆಗೆ ಸರಿಯಾಗಿ ಬಂದ ಟೇಕನ್ನು ಮಾತ್ರ ಧ್ವನಿ ಪಟಲ (ಸೌಂಡ್ ಫಿಲ್ಮ್) ಕ್ಕೆ ಬದಲಾಯಿಸಿಕೊಂಡು ಮಿಕ್ಕಿದ್ದನ್ನೆಲ್ಲಾ ಅಳಿಸಿಬಿಡುತ್ತಾರೆ. ಧ್ವನಿ ಪಟಲ ಹೆಚ್ಚು ಬೆಲೆಯದಾದ್ದರಿಂದ ಈ ಪದ್ಧತಿಯಿಂದ ಖರ್ಚನ್ನು ಕಡಿಮೆ ಮಾಡಬಹುದು.

ಹಾಡನ್ನು ಧ್ವನಿ ಪಟಲಕ್ಕೆ ಬದಲಾಯಿಸಿದ ನಂತರ ಪಟಲವನ್ನು ಸ್ಪಷ್ಟ (ಡೆವಲಪ್) ಗೊಳಿಸಲಾಗುತ್ತದೆ. ಹೊರಾಂಗಣದ ಚಿತ್ರೀಕರಣದಲ್ಲಿ ಅಥವಾ ಸ್ಟೂಡಿಯೋ ಚಿತ್ರೀಕರಣದಲ್ಲಿ ಧ್ವನಿ ಪ್ರಸಾದನಕ್ಕೆ (ಪ್ಲೇಬ್ಯಾಕ್) ಉಪಯೋಗಿಸು ವುದಕ್ಕಾಗಿಯೇ ಒಂದು ಪ್ರತಿಯನ್ನು ಪ್ರಿಂಟ್ ಮಾಡುತ್ತಾರೆ. ಮತ್ತೊಂದು ಪ್ರತಿ ಯನ್ನು ಗ್ರಾಮಫೋನ್ ಕಂಪೆನಿಗೆ ರೆಕಾರ್ಡುಗಳನ್ನು ತಯಾರಿಸಲು ಕಳುಹಿಸುತ್ತಾರೆ.

ಈ ರೀತಿ ಪೂರ್ಣಗೊಂಡು ಬಿಡುಗಡೆಯಾದ ಚಿತ್ರಗಳ ಮೂಲಕ, ಆಕಾ ಶವಾಣಿ ಮತ್ತು ದೂರದರ್ಶನ ಕಾರ್ಯಕ್ರಮಗಳ ಮೂಲಕ ಈ ಹಾಡುಗಳು ಲಕ್ಷಗಟ್ಟಲೆ ಜನಗಳಿಗೆ ಸೇರುತ್ತವೆ. ಅನೇಕರು ಇವುಗಳನ್ನು ಕೇಳಿ ಆನಂದಿಸುತ್ತಾರೆ. ಮತ್ತೆ ಕೆಲವರು ಚೆನ್ನಾಗಿಲ್ಲವೆನ್ನುತ್ತಾರೆ. ಒಟ್ಟಿನಲ್ಲಿ ಈ ಹಾಡುಗಳು ಆಯಾ ಚಿತ್ರಗಳಿಗೆ ಒಂದು ರೀತಿಯ ಜಾಹೀರಾತು ಕೆಲಸ ಮಾಡುತ್ತವೆ.

ಅನೇಕ ಭಾರತೀಯ ಚಿತ್ರಗಳಲ್ಲಿ ಪಾಪ್ ಸಂಗೀತವಿರುತ್ತದೆ. ಆದರೆ ಕೆಲವು ಪ್ರಾಯೋಗಾತ್ಮಕ ಚಿತ್ರಗಳಲ್ಲಿ ಹಾಡುಗಳಿರುವುದಿಲ್ಲ. ಒಟ್ಟು ಜನಪ್ರಿಯತೆಗಾಗಿ ಹಾಡುಗಳನ್ನು ಉಪಯೋಗಿಸುವುದು ಒಂದು ಸಾಧಾರಣ ನಿಯಮವಾಗಿಬಿಟ್ಟಿದೆ ಪ್ರಾಯೋಗಿಕ ಚಿತ್ರಗಳು ಈ ನಿಯಮವನ್ನು ಪಾಲಿಸುವುದಿಲ್ಲ.

ಬರೀ ಹಾಡುಗಳಿಂದ ಚಿತ್ರದ ಸಂಗೀತದ ಅವಶ್ಯಕತೆ ಪೂರ್ಣಗೊಳ್ಳುವುದಿಲ್ಲ.

ಚಿತ್ರದ ಚಿತ್ರೀಕರಣ ಪೂರ್ಣವಾದ ನಂತರ ದೃಶ್ಯದ ನಾಟಕೀಯ ಪ್ರಭಾವವನ್ನು ಹೆಚ್ಚು ಪರಿಣಾಮಕಾರಿಯಾಗಿ ಮಾಡಲು ಹಾಗೂ ಒಂದೇ ವೇಗದಲ್ಲಿ ಓಡುತ್ತಿರುವ ಮೂಕ ದೃಶ್ಯಗಳ ಬೇಸರ ತಪ್ಪಿಸಲು ಹಿನ್ನೆಲೆ ವಾದ್ಯ-ಸಂಗೀತದ ಅವಶ್ಯಕತೆ ಇದ್ದೇ ಇರುತ್ತದೆ. ಈ ಹಿನ್ನೆಲೆ ವಾದ್ಯ-ಸಂಗೀತವೂ ಕೂಡ ಧ್ವನಿ ಮುದ್ರಣ ಕೋಣೆಯಲ್ಲೇ ನಡೆಯುತ್ತದೆ. ಚಿತ್ರದಲ್ಲಿ ಎಲ್ಲೆಲ್ಲಿ ಹಿನ್ನೆಲೆ ವಾದ್ಯ-ಸಂಗೀತದ ಅವಶ್ಯಕತೆ ಇದೆಯೋ ಆಯಾ ಭಾಗಗಳನ್ನು ಮತ್ತೆ ಮತ್ತೆ ಪ್ರದರ್ಶಿಸಲಾಗುತ್ತದೆ. ಸಂಗೀತ ನಿರ್ದೇಶಕ ರಚಿಸಿರುವ ಹಿನ್ನೆಲೆ ವಾದ್ಯ ಸಂಗೀತವನ್ನು ವಾದ್ಯ ವೃಂದದವರು ಅಭ್ಯಾಸ ಮಾಡುವುದಕ್ಕೆ ಇದು ನೆರವಾಗುತ್ತದೆ. ಹಾಡುಗಳನ್ನು ಧ್ವನಿ ಮುದ್ರಣ ಮಾಡುತ್ತಾರೆ. ಕೆಲವು ಸಾರಿ ತಾನ ಅಥವಾ ಮೇಳ ಪ್ರಭಾವಗಳಿಗೆ ಬರೀ ವಾದ್ಯ ವೃಂದವನ್ನಲ್ಲದೇ ಮನುಷ್ಯರ ಧ್ವನಿಗಳನ್ನೂ ಉಪಯೋಗಿಸುತ್ತಾರೆ.

ಹಿನ್ನೆಲೆ ವಾದ್ಯ ಸಂಗೀತ ಮುಗಿದ ನಂತರವೇ (ಹಾಡುಗಳಿಲ್ಲದಿರುವ ಚಿತ್ರಗಳಿಗಂತೂ ಇದು ಬಹಳ ಮುಖ್ಯ) ಚಿತ್ರ ಪುನರ್ ಧ್ವನೀಕರಣಕ್ಕೆ (ರೀರೆಕಾರ್ಡಿಂಗ್) ತಯಾರಾಗುತ್ತದೆ. ಚಿತ್ರ ಪೂರ್ಣವಾಗಲು ಇದೇ ಕೊನೆಯ ಹಂತ. ಇದಾದ ತಕ್ಷಣವೇ ಪೂರ್ಣವಾದ ಚಿತ್ರವನ್ನು ಎಲ್ಲೆಡೆಯೂ ಲಕ್ಷಗಟ್ಟಲೆ ಜನರು ಚಿತ್ರಮಂದಿರಗಳಲ್ಲಿ ನೋಡುವಂತೆ ನಾವೂ ಸಹ ನಮ್ಮ ಊರಿನ ಚಿತ್ರಮಂದಿರದಲ್ಲಿ ನೋಡಬಹುದು.

## ಮದುವಣಗಿತ್ತಿಯ ಅಲಂಕಾರ

ಇದುವರೆವಿಗೆ ಛಾಯಾಗ್ರಾಹಕ ಎಲ್ಲಾ ದೃಶ್ಯಗಳನ್ನು ಚಿತ್ರೀಕರಿಸಿರುತ್ತಾನೆ.

ಧ್ವನಿ ಮುದ್ರಣ ಮಾಡುವವನು ಎಲ್ಲಾ ಧ್ವನಿಗಳನ್ನೂ ಮುದ್ರಿಸಿ, ಬೇರೆ ಬೇರೆ ಪಾತ್ರಗಳ ಸಂಭಾಷಣೆಗಳನ್ನು ಧ್ವನಿ ಮಿಲನ ಮಾಡಿರುತ್ತಾನೆ.

ಎಲ್ಲಾ ಧ್ವನಿ ಪ್ರಭಾವ (ಸೌಂಡ್ ಎಫೆಕ್ಟ್ಸು) ಗಳನ್ನು ಬೇರೆ ಬೇರೆಯಾಗಿ ಧ್ವನಿ ಮುದ್ರಣ ಮಾಡಿರುತ್ತಾನೆ. ಪ್ರಾಸಂಗಿಕವಾದರೂ ಅಭಿನಯಕ್ಕೆ ಅತಿ ಮುಖ್ಯವಾಗಿರುವ ಬಾಗಿಲು ತೆಗೆದು ಹಾಕುವ ಸದ್ದು, ಕಾರಿನ ಹಾರನ್ ಶಬ್ದ, ರೈಲಿನ ಗಡಗಡ ಸದ್ದು, ಬೂಟುಕಾಲಿನ

ಸದ್ದು, ಕುದುರೆ ಗಾಡಿ ಅಥವಾ ಎತ್ತಿನ ಗಾಡಿಯ ಶಬ್ದ, ಸೋಡಾ ಬಾಟಲು ಒಡೆಯುವ ಸದ್ದು, ನಾಯಿ ಬೊಗಳುವ ಅಥವಾ ಬೆಕ್ಕಿನ ಮಿಯಾವ್ ಮುಂತಾದ ಶಬ್ದಗಳನ್ನು ಬೇರೆ ಬೇರೆಯಾಗಿ ಧ್ವನಿಮುದ್ರಿಸುತ್ತಾನೆ.

ಮೊದಲೇ ಯೋಚಿಸಿರುವ ಕೆಲವು ಸಂದರ್ಭಗಳಿಗೆ, ಅಂದರೆ ಮೂಕ ದೃಶ್ಯಗಳ ನಾಟಕೀಯ ಪ್ರಭಾವವನ್ನು ಹೆಚ್ಚಿಸಲು ಅಥವಾ ಹಾಸ್ಯ ಅಥವಾ ದುರಂತ, ಗಂಭೀರ ಅಥವಾ ಉಲ್ಲಾಸ ಭಾವನೆಗಳನ್ನು ತರಲು, ತಕ್ಕ ಹಿನ್ನೆಲೆ ವಾದ್ಯ ಸಂಗೀತವನ್ನು ಮೊದಲೇ ಧ್ವನಿ ಮುದ್ರಣ ಮಾಡಿರುತ್ತಾರೆ.

ಧ್ವನಿ ಪಟಲದ ಬೇರೆ ಬೇರೆ ಮೂರು ಪಟ್ಟಿಗಳಿರುತ್ತದೆ. ಈ ಮೂರು ಪಟ್ಟಿಗಳ ಮೇಲೂ ಬೇರೆ ಬೇರೆಯಾಗಿ ಸಂಭಾಷಣೆ, ಧ್ವನಿ ಪ್ರಭಾವಗಳು ಮತ್ತು ಹಿನ್ನೆಲೆ ಸಂಗೀತವನ್ನು ಮುದ್ರಿಸಿರುತ್ತಾರೆ. ಈ ಮೂರನ್ನೂ ಅಳವಡಿಸಿದ ಕೊನೆಯ ಧ್ವನಿ ಪಟಲ 'ಧ್ವನಿ ಪಥ' ಎಂದು ಕರೆಸಿಕೊಳ್ಳುತ್ತದೆ. ಪಿಕ್ಚರ್ ಇರುವ ಫಿಲ್ಮ್ ಪಟ್ಟಿಯ ಒಂದು ಕೊನೆಯಲ್ಲಿ ಇದನ್ನು ಪ್ರಿಂಟ್ ಮಾಡುತ್ತಾರೆ.

ಈ ಮೂರು ಬೇರೆ ಬೇರೆ ಧ್ವನಿ ಪಟಲಗಳನ್ನು ಒಂದೇ ಧ್ವನಿ ಪಟಲದಲ್ಲಿ ಅಳವಡಿಸುವುದನ್ನು 'ಮಿಶ್ರಣ' (ಮಿಕ್ಸಿಂಗ್) ಎಂದು ಕರೆಯುತ್ತಾರೆ. ಒಂದೇ ಒಂದು ಧ್ವನಿ ಪಟಲದ ಮೇಲೆ ವಿವಿಧ ಧ್ವನಿಗಳ - ಸಂಭಾಷಣೆ, ಧ್ವನಿ ಪ್ರಭಾವ, ಹಿನ್ನೆಲೆ ವಾದ್ಯ ಸಂಗೀತ, ಹಿನ್ನೆಲೆ ಗಾಯನ, ಇತ್ಯಾದಿ - ಅನೇಕ ಪಟಲಗಳನ್ನು ಅಳವಡಿಸುವುದನ್ನು ರೀರೆಕಾರ್ಡಿಂಗ್ ಮೂಲಕ ಮಾಡುತ್ತಾರೆ.

ಮೊದಲು ಪ್ರತಿಯೊಂದು ಧ್ವನಿ ಪಟಲವನ್ನೂ ಪಿಕ್ಚರ್ ಇರುವ ಪಟ್ಟಿಯ ಜೊತೆಗೆ ಕ್ರಮವಾಗಿ ಹೊಂದಾಣಿಸುತ್ತಾರೆ. ಆಮೇಲೆ ಧ್ವನಿಯಿರುವ ಎಲ್ಲಾ ಧ್ವನಿ ಪಟಲಗಳನ್ನೂ ಪಿಕ್ಚರ್ ಫಿಲ್ಮ್ ಜೊತೆ ಒಟ್ಟಿಗೆ ಒಂದು ವಿಶಿಷ್ಟವಾದ ದೃಶ್ಯ ಯಂತ್ರದಿಂದ ಓಡಿಸುತ್ತಾರೆ. ಪುನರ್ ಧ್ವನೀಕರಣ ಮಾಡುವವನು ತನ್ನ ಕೊಠಡಿಯಲ್ಲಿ ಕೂತು ಮುಂದಿರುವ ಸ್ವಿಚ್ ಮತ್ತು ಹಿಡಿಕೆಗಳ ಸಹಾಯದಿಂದ ಸಂಭಾಷಣೆ ಬಂದಾಗ ಸಂಗೀತವನ್ನು ಕಡಿಮೆ ಮಾಡುತ್ತಾ, ಆಗಾಗ್ಗೆ ಧ್ವನಿ ಪ್ರಭಾವಗಳಿಗೆ ಪ್ರಾಮುಖ್ಯತೆ ಕೊಡುತ್ತಾ, ಸರಿಯಾದ ಜಾಗದಲ್ಲಿ ಹಿನ್ನೆಲೆ ಸಂಗೀತವನ್ನು ಬಳಸುತ್ತಾ, ತನ್ನ ಕೈ ಚಳಕವನ್ನು ತೋರಿಸುತ್ತಾನೆ. ಹಿಡಿಕೆಯನ್ನು ಕೊಂಚ ತಿರುಗಿಸಿದರೆ ಧ್ವನಿಗಳು ಜೋರಾಗುತ್ತವೆ. ವಿರುದ್ಧ ದಿಕ್ಕಿನಲ್ಲಿ ತಿರುಗಿಸಿದರೆ ಪಿಸು ಮಾತಾಡಿದಂತಾಗುತ್ತದೆ. ದೃಶ್ಯಗಳ ಭಾವ ಮತ್ತು ಗತಿಗೆ ತಕ್ಕಹಾಗೆ ಇದನ್ನು ವ್ಯತ್ಯಾಸ ಮಾಡುತ್ತಾರೆ. ಆದ್ದರಿಂದ ಪುನರ್ ಧ್ವನೀಕರಣ ಮಾಡುವವನಿಗೆ

ಸಂಭಾಷಣೆ, ಹಿನ್ನೆಲೆ ಸಂಗೀತ, ಮತ್ತು ಧ್ವನಿ ಪ್ರಭಾವಗಳ ನಡುವೆ ಸಮತೆ ತರಲು ನಾಟಕೀಯ ಮತ್ತು ಸಂಗೀತದ ಜ್ಞಾನವಿರಲೇಬೇಕು.

ಆದರೆ ಒಟ್ಟಿನ ಮೇಲ್ವಿಚಾರಣೆಯೆಲ್ಲಾ ನಿರ್ದೇಶಕನದೇ ಆಗಿರಬೇಕು. ಪುನರ್ ಧ್ವನೀಕರಣದಲ್ಲಿ ಅಡಕಗೊಂಡಿರುವ ವಿವಿಧ ರೀತಿಯ ಅಗತ್ಯಗಳ ಬಗ್ಗೆ ಒಂದ ಕ್ಕೊಂದರ ಸಂಬಂಧದ ಬಗ್ಗೆ ನಿರ್ದೇಶಕನೇ ನಿರ್ಧರಿಸಬೇಕು. ಉಳಿದ ತಾಂತ್ರಿಕ ಕೆಲಸಗಳನ್ನೆಲ್ಲಾ ಧ್ವನಿ ಮುದ್ರಣ ಮಾಡುವವರೋ ಅಥವಾ ಪುನರ್ ಧ್ವನೀಕರಣ ಮಾಡುವವರೋ ನೋಡಿಕೊಳ್ಳುತ್ತಾರೆ. ಆದರೂ ನಿಮಗೆಲ್ಲಾ ತಿಳಿದ ಹಾಗೆ ಚಿತ್ರದ ಯಾವುದೇ ಭಾಗವನ್ನು ತೆಗೆದುಕೊಂಡರೂ ಅದರ ಕಟ್ಟಕಡೆಯ ನಿರ್ಧಾರ ಅಥವಾ ಜವಾಬ್ದಾರಿ ನಿರ್ದೇಶಕನದೇ.

ಪುನರ್ ಧ್ವನೀಕರಣ ಮುಗಿದ ನಂತರ ಮಿಶ್ರಿತವಾದ ಧ್ವನಿ ಪ್ರಭಾವಗಳು, ಧ್ವನಿಗಳು ಮತ್ತು ಹಿನ್ನೆಲೆ ಸಂಗೀತಗಳನ್ನು ಒಳಗೊಂಡ ಒಂದೇ ಒಂದು ಪಥವನ್ನು 'ಪುನರ್ ಧ್ವನೀಕೃತ ಧ್ವನಿಪಥ' (ರೀರೆಕಾರ್ಡಿಂಗ್ ಸೌಂಡ್ ಟ್ರ್ಯಾಕ್) ಎಂದು ಕರೆಯುತ್ತಾರೆ. ಇದನ್ನೂ ದೃಶ್ಯಗಳ ಫಿಲ್ಮನ್ನೂ ಒಟ್ಟಿಗೆ ಪ್ರಿಂಟ್ ಮಾಡಿದರೆ ಪೂರ್ತಿಯಾದ ವಾಕ್ಚಿತ್ರ ಸಿಕ್ಕುತ್ತದೆ. ಇದನ್ನು 'ಸಂಯುಕ್ತ ಪ್ರತಿ' (ಮ್ಯಾರೀಡ್ ಪ್ರಿಂಟ್) ಎಂದು ಕರೆಯುತ್ತಾರೆ. ಧ್ವನಿ ಮತ್ತು ಚಿತ್ರಕ್ಕೆ ಮದುವೆಯಾದಂತೆ. ಆದ್ದರಿಂದಲೇ ಪುನರ್ಧ್ವನೀಕರಣದ ಕೊನೆಯ ಘಟ್ಟ ವಧುವಿಗೆ ಅಲಂಕಾರ ಮಾಡಿ ಮುಗಿಸಿದಂತೆ. ಈಗ ಮದುಮಗಳು — ಅಂದರೆ ಸಂಯುಕ್ತ ಪ್ರತಿ, ಪ್ರದರ್ಶನಾರ್ಹ ಪ್ರತಿ — ಪ್ರೇಕ್ಷಕರಿಗೆ ಮುಖ ತೋರಿಸಲು ಸಿದ್ಧಳಾಗಿದ್ದಾಳೆ.

# ಸಿನೆಮಾದ ಲೆಕ್ಕಾಚಾರ

ಈಗ ನಿಮಗೆ ಚಲನಚಿತ್ರ ಒಂದು ರಹಸ್ಯಮಯ ಇಂದ್ರಜಾಲವಲ್ಲ.

ಚಿತ್ರಗಳು ಚಲಿಸುತ್ತಿವೆಯೇನೋ ಎಂಬ ಭ್ರಮೆಯನ್ನುಂಟು ಮಾಡುವ ವೈಜ್ಞಾನಿಕ ತಂತ್ರದ ಪರಿಣಾಮವಷ್ಟೇ. ಈ ಭ್ರಮೆಯನ್ನು ಹೇಗೆ ಸೃಷ್ಟಿಸುತ್ತಾರೆಂಬುದು ಈಗ ನಿಮಗೆ ಪೂರ್ಣವಾಗಿ ತಿಳಿದ ವಿಷಯ.

ಕಪ್ಪು ಬಿಳುಪು ಅಥವಾ ವರ್ಣಚಿತ್ರಗಳನ್ನು ಮತ್ತು ಧ್ವನಿ ಪ್ರಭಾವ, ಸಂಗೀತವನ್ನು ಉಪಯೋಗಿಸಿ ಒಂದು ಕಥೆಯನ್ನು ಚಲನಚಿತ್ರ ರೂಪದಲ್ಲಿ ಹೇಳುವ ತಾಂತ್ರಿಕ ವಿಧಾನವೇ ಚಲನಚಿತ್ರ ತಯಾರಿಕೆ. ಚಿತ್ರೀಕರಣ ಮತ್ತು ಧ್ವನಿ ಮುದ್ರಣ ಎರಡನ್ನೂ ಬೇರೆ ಬೇರೆಯಾಗಿ ಮಾಡಿ, ಸನ್ನಿವೇಶಕ್ಕೆ ತಕ್ಕ ಹಾಗೆ ನಿರ್ದೇಶಕ ಮತ್ತು ಸಂಪಾದಕ ಇಬ್ಬರೂ ಸೇರಿ ಯೋಚಿಸಿ ಒಟ್ಟಿಗೆ ಸೇರಿಸುತ್ತಾರೆ.

ಕಥೆ, ನಾಟಕ, ಕಾದಂಬರಿ ಅಥವಾ ಪದ್ಯದಂತೆ ಚಲನಚಿತ್ರ ಒಂದು ಹೊಸ ಮಾದರಿಯ ಮನರಂಜನೆ. ಅಭಿನಯ ಕಲೆ, ಚಿತ್ರಕಲೆ, ಶಿಲ್ಪಕಲೆ, ಕೆತ್ತನೆ ಕೆಲಸ, ಎಲ್ಲಕ್ಕಿಂತ ಹೆಚ್ಚಾಗಿ ಸಂಗೀತ ಕಲೆ ಇವೆಲ್ಲವನ್ನೂ ಒಟ್ಟು ಸೇರಿಸಿರುವ ಹೊಸಕಲೆ ಚಲನಚಿತ್ರ.

ಇತರ ಕಲೆಗಳಿಂದ ಚಲನಚಿತ್ರ ಕಲೆಯನ್ನು ಬೇರ್ಪಡಿಸುವುದು ಅದರ ನಿರ್ಮಾಣ ದಲ್ಲಿ ಅಗತ್ಯವಾಗಿರುವ ತೊಡಕಿನ ವಿಧಾನಗಳು. ಇದೇ ಅದರ ವೈಶಿಷ್ಟ್ಯ. ಒಂದು

ಚಲನಚಿತ್ರವನ್ನು ಮಾಡಿ ಮುಗಿಸಬೇಕಾದರೆ ಕೆಲಸ ಮಾಡಲು ನೂರಾರು ಜನ ಗಂಡಸರು, ಹೆಂಗಸರು, ಡಜನ್‌ಗಟ್ಟಲೆ ಯಂತ್ರಗಳೂ ಮತ್ತು ತಿಂಗಳುಗಳು ಅಥವಾ ವರ್ಷಗಳ ಕಾಲಾವಕಾಶ ಅಗತ್ಯವಾಗುತ್ತದೆ. ಬಹಳ ಇಂಪಾದ ರಾಗ ಒಂದನ್ನು ಒಂದೇ ಒಂದು ರೂಪಾಯಿ ಖರ್ಚಿನ ಒಂದು ಬೊಂಬಿನ ಕೊಳಲನ್ನು ಊದಿ, ಪಡೆದು ಆನಂದಿಸಬಹುದು. ಅಷ್ಟು ಖರ್ಚು ಬೇಡವೆಂದರೆ ನಿಮ್ಮ ಗಂಟಲಿಂದಲೇ ಸೊಗಸಾದ ಗಾನವನ್ನು ಹೊಮ್ಮಿಸಬಹುದು.

ಒಂದು ಶ್ರೇಷ್ಠವಾದ ಚಿತ್ರಕಲೆಯ ತಯಾರಿಕೆಗೆ ಬೇಕಾದ್ದೆಲ್ಲಾ ಒಂದು ನಾರಿನ ಬಟ್ಟೆ (ಕ್ಯಾನ್‌ವಾಸ್) ಮತ್ತು ನೂರು ರೂಪಾಯಿಗಳ ಬಣ್ಣ. ಅದೂ ಇಲ್ಲದಿದ್ದರೆ ಒಂದು ಇದ್ದಲಿನ ಚೂರಿನಿಂದ ಗೋಡೆಯ ಮೇಲೆ ಬರೆಯಲೂ ಸಾಧ್ಯ.

ಎಷ್ಟೇ ಕಮ್ಮಿ ಖರ್ಚಿನಿಂದ ಚಲನಚಿತ್ರ ಮಾಡುತ್ತೇವೆಂದರೂ ಕೆಲವು ಲಕ್ಷ ರೂಪಾಯಿಗಳಾದರೂ ಬೇಕೆ ಬೇಕು. ಅಷ್ಟೇ ಅಲ್ಲದೆ ಡಜನ್‌ಗಟ್ಟಲೆ ಚತುರರಾದ ತಾಂತ್ರಿಕ ವರ್ಗದವರು, ಛಾಯಾಗ್ರಹಕ, ಧ್ವನಿ ಮುದ್ರಕ, ಕಲಾ ನಿರ್ದೇಶಕ, ದೀಪದಾಳುಗಳು ಮತ್ತು ಬೆಲೆಬಾಳುವ ಛಾಯಾಗ್ರಹಣ ಯಂತ್ರ, ಮುದ್ರಣ ಯಂತ್ರ, ಸಂಪಾದನೆಗೆ ಅಗತ್ಯವಾದ ಮೇಜು ಮತ್ತು ಫಿಲ್ಮ್ ಓಡಿಸಲು ಬೇಕಾಗುವಂಥ ದೃಶ್ಯಯಂತ್ರ (ಪ್ರೊಜೆಕ್ಟರ್) ಎಲ್ಲಾ ಬೇಕು. ಇವೆಲ್ಲಕ್ಕಿಂತ ಹೆಚ್ಚಾಗಿ ಮುಖ್ಯವಾಗಿ ಬೇಕಾದ್ದು ಚಿತ್ರೀಕರಣಕ್ಕೆ ಅವಶ್ಯಕವಾದ ಫಿಲ್ಮ್ ಮತ್ತು ಧ್ವನಿ ಪಟಲ. ಇವೆಲ್ಲಾ ಹೆಚ್ಚಿನ ಬೆಲೆಯವು.

ಒಂದು ಸಾವಿರ ಅಡಿ ಬಣ್ಣದ ಮೂಲ ಪಟಲ (ಕಲರ್ ಫಿಲ್ಮ್‌ನೆಗೆಟೀವ್)ದ ಬೆಲೆ ಸುಮಾರು ಎರಡು ಸಾವಿರ ರೂಪಾಯಿಗಳು. ಛಾಯಾಗ್ರಹಣ ಯಂತ್ರದಲ್ಲಿ ಇದು ಸರಿಯಾಗಿ ಹನ್ನೊಂದು ನಿಮಿಷ ಓಡುತ್ತದೆ. ಒಂದು ಸಣ್ಣ ಚೂರೂ ದಂಡವಾಗದಂತೆ ಬಹಳ ಜಾಗರೂಕತೆಯಿಂದ ಉಪಯೋಗಿಸಿದರೆ ಮೂರು ಅಥವಾ ನಾಲ್ಕು ನಿಮಿಷಗಳ ಪೂರ್ಣವಾದ ಫಿಲ್ಮ್ ಕೈಗೆ ಬರುತ್ತದೆ. ಆದ್ದರಿಂದ ಎರಡು ಗಂಟೆಗಳ ಕಾಲದ ಒಂದು ಪೂರ್ಣಾಕೃತಿಯ ಚಿತ್ರಕ್ಕೆ ನಲವತ್ತು ಅಥವಾ ಐವತ್ತು ಡಬ್ಬ ಮೂಲ ಪಟಲ ಬೇಕಾಗುತ್ತದೆ. ವಾಣಿಜ್ಯ ಚಿತ್ರಗಳ ನಿರ್ಮಾಪಕರು ಇಂಥ ನೂರಾರು ಡಬ್ಬಗಳನ್ನು ಒಂದು ಚಿತ್ರಕ್ಕೆ ಉಪಯೋಗಿಸುತ್ತಾರೆ.

ಸಂಭಾಷಣೆ, ಧ್ವನಿ ಪ್ರಭಾವ, ಹಾಡುಗಳು ಮತ್ತು ಸಂಗೀತಗಳನ್ನು ಧ್ವನಿ ಮುದ್ರಣ ಮಾಡಲು ಬೇಕಾಗುವ ಧ್ವನಿ ಪಟಲ (ಸೌಂಡ್ ಫಿಲ್ಮ್) ಸಾವಿರ ಅಡಿಗಳ ಒಂದು ಚಕ್ರಕ್ಕೆ ಸುಮಾರು ಐನೂರು ರೂಪಾಯಿಗಳಾಗುತ್ತದೆ. ಒಂದು ಚಿತ್ರಕ್ಕೆ ಅಂಥ ನೂರು ಚಕ್ರಗಳಾದರೂ ಬೇಕಾಗುತ್ತದೆ.

ಸುಮಾರು ಎರಡೂವರೆ ಗಂಟೆ ಕಾಲದ ಒಂದು ವರ್ಣ ಚಲನಚಿತ್ರದ ಒಂದೊಂದು ಪ್ರಿಂಟ್ ತೆಗೆಯಲು ಕೊನೆಯ ಪಕ್ಷ 13,000 ರೂಪಾಯಿ ಆಗುತ್ತದೆ. ಒಂದು ಚಿತ್ರ ಭಾರತಾದ್ಯಂತ ಬಿಡುಗಡೆಯಾಗಬೇಕಾದರೆ ಎಪ್ಪತ್ತರಿಂದ ಎಂಭತ್ತು ಪ್ರಿಂಟ್‌ಗಳಾದರೂ ಬೇಕು. ಇದೇ ಉದ್ದದ ಕಪ್ಪು-ಬಿಳುಪು ಚಿತ್ರದ ಪ್ರಿಂಟ್ ಒಂದಕ್ಕೆ ನಾಲ್ಕು ಸಾವಿರ ರೂಪಾಯಿಗಳಾಗುತ್ತದೆ. ಈ ಅಂಕಿ ಅಂಶಗಳು ಒಂದು ಚಲನಚಿತ್ರ ತಯಾರಾಗಲು ತಗಲುವ ವೆಚ್ಚದ ಅಂದಾಜನ್ನು ನೀಡುತ್ತವೆ.

ಆದ್ದರಿಂದಲೇ ಚಲನಚಿತ್ರ ತಯಾರಿಕೆ ಎಲ್ಲಾ ಕಲೆಗಳಿಗಿಂತ ಹೆಚ್ಚು ದುಬಾರಿ ಕಲೆಯಾಗಿದೆ. ಚಲನಚಿತ್ರ ತಯಾರಿಕೆಗೆ ಇಷ್ಟೊಂದು ಹಣದ ಅವಶ್ಯಕತೆ ಇರುವುದರಿಂದಲೇ ಈ ಕಸುಬು ಹಣವಿರುವವರ, ಹಣ ವ್ಯವಸ್ಥೆ ಮಾಡುವವರ, ದುಡ್ಡಿರುವ ನಿರ್ಮಾಪಕರುಗಳ ಕೈಯಲ್ಲಿದೆ. ಕಲೆ ಎನಿಸಿಕೊಂಡರೂ ಈಗ ಅದು ಒಂದು ಉದ್ಯಮವಾಗಿದೆ. ಜನಗಳು ಚಲನಚಿತ್ರ ಕೈಗಾರಿಕೆ (ಫಿಲ್ಮ್ ಇಂಡಸ್ಟ್ರಿ) ಎಂದು ಮಾತನಾಡುವುದನ್ನು ನೀವು ಕೇಳಿರಬಹುದು.

ಛಾಯಾಗ್ರಾಹಕ ಯಂತ್ರಗಳು ಫೌಂಟನ್ ಪೆನ್ನುಗಳಷ್ಟು ಮತ್ತು ಕಚ್ಚಾ ಫಿಲ್ಮ್ ಕಾಗದದಷ್ಟು ಅಗ್ಗವಾದಾಗ ಚಲನಚಿತ್ರಗಳು ನಿಜವಾಗಿಯೂ ಕಲೆಯಾಗುತ್ತದೆ ಎಂದು ಫ್ರಾನ್ಸಿನ ಪ್ರಸಿದ್ಧ ಲೇಖಕ ಮತ್ತು ಚಲನಚಿತ್ರ ನಿರ್ದೇಶಕ ಜೀನ್ ಕಾಕ್‌ಟೇ ಹೇಳಿದ್ದಾನೆ.

ಅವನು ಹೇಳುವುದರ ಅರ್ಥವೇನೆಂದರೆ ಲಕ್ಷಗಟ್ಟಲೆ ಫ್ರ್ಯಾಂಕ್ಸ್ ಅಥವಾ ರೂಪಾಯಿಗಳ ಅವಶ್ಯಕತೆ ಎಲ್ಲಿಯವರೆಗೆ ಇದೆಯೋ ಅಲ್ಲಿಯವರೆಗೆ ಚಲನಚಿತ್ರ ತಯಾರಿಕೆ ಒಂದು ಖರ್ಚಿನ ಕೈಗಾರಿಕೆಯಾಗಿ ಹಣವಂತರ ಕೈಯಲ್ಲೇ ಉಳಿಯುತ್ತದೆ. ತಾವು ಹಾಕಿದ ಬಂಡವಾಳವನ್ನು ಅಧಿಕ ಲಾಭದೊಂದಿಗೆ ಪಡೆಯಲು ಆಕರ್ಷಣೀಯ ವರ್ಣ, ಬೆಲೆ ಬಾಳುವ ಸೆಟ್ಟುಗಳು, ಅಲಂಕಾರ ವಸ್ತುಗಳು, ಹೆಚ್ಚು ಹಣ ತೆಗೆದುಕೊಳ್ಳುವ ಜನಪ್ರಿಯ ತಾರಾ ಜೋಡಿ, ಸಂಗೀತ ನಿರ್ದೇಶಕರು ಮತ್ತು ಹಿನ್ನೆಲೆ ಗಾಯಕರು ಮುಂತಾದ ವ್ಯವಸ್ಥೆಗಳನ್ನು ಮಾಡಿಕೊಳ್ಳುತ್ತಾರೆ.

← ಛಾಯಾಗ್ರಾಹಕನು ಚಿತ್ರೀಕರಣಕ್ಕೆ ಸಿದ್ಧನಾಗುತ್ತಿರುವುದು.

ಚಿತ್ರದ ಜಾಹೀರಾತುಗಳಿಗಾಗಿ ಪತ್ರಿಕೆ ಹಾಗೂ ಭಿತ್ತಿಚಿತ್ರಗಳ ನೆರವಿನಿಂದ ಹಾಗೂ ರೇಡಿಯೋ ಮುಖಾಂತರ ತಮ್ಮ ಚಿತ್ರಗಳನ್ನು ಚಿತ್ರಗಳ ಹಾಡುಗಳನ್ನೂ ಜನಪ್ರಿಯ ಮಾಡಲು ಹೆಚ್ಚಿನ ಹಣವನ್ನು ಖರ್ಚು ಮಾಡುತ್ತಾರೆ. ನಿರ್ಮಾಪಕರುಗಳಲ್ಲಿ ಸ್ಪರ್ಧೆ ಬಂದಾಗ ಈ ಒಂದೊಂದು ಅಂಶಗಳ ಬೆಲೆಯೂ ಏರುತ್ತಾ ಹೋಗುತ್ತದೆ. ಈಚಿನ ದಿನಗಳಲ್ಲಿ ಈ ರೀತಿಯ ವಾಣಿಜ್ಯ ಚಲನಚಿತ್ರಗಳ ನಿರ್ಮಾಣಕ್ಕೆ ಒಂದು ಕೋಟಿ ರೂಪಾಯಿ ಖರ್ಚಾಗುತ್ತದೆ. ಇಂಥಾ ಚಿತ್ರಗಳಲ್ಲಿ ಕಲೆಗಿಂತ ಹೆಚ್ಚಾಗಿ ಲೆಕ್ಕಾಚಾರವೇ ತುಂಬಿರುತ್ತದೆ.

ಆದ್ದರಿಂದಲೇ ಚಲನಚಿತ್ರ ತಯಾರಿಕೆಯಲ್ಲಿ ಖರ್ಚು ಕಡಿಮೆ ಮಾಡಬಲ್ಲ ಯಾವುದೇ ಸಲಹೆಗೆ ಆಹ್ವಾನವಿದೆ. ಕೆಲವು ದೇಶಗಳಲ್ಲಿ ಹೊರಾಂಗಣ ಚಿತ್ರೀಕರಣಕ್ಕೆ — ವಾಸ್ತವವಾಗಿ ರಸ್ತೆಗಳಲ್ಲೇ ಚಿತ್ರೀಕರಿಸಲು — ಅಗ್ಗವಾದ, ಸಾಗಿಸಲು ಅನುಕೂಲವಾದ, ಛಾಯಾಗ್ರಹಣ ಯಂತ್ರಗಳೂ, ಧ್ವನಿ ಮುದ್ರಣ ಯಂತ್ರಗಳೂ ಹಾಗೂ ದೀಪಗಳನ್ನು ಉಪಯೋಗಿಸುತ್ತಾರೆ.

ಭಾರತದಲ್ಲಿ ಸರ್ಕಾರದ ಫಿಲ್ಮ್ ಫೈನಾನ್ಸ್ ಕಾರ್ಪೊರೇಷನ್ ಹೊಸ ಉತ್ಸಾಹೀ ತರುಣ ನಿರ್ದೇಶಕರುಗಳಿಗೆ ಹೊಸ ಕಲಾವಿದರನ್ನು ಆರಿಸಿ ಕಮ್ಮಿ ವೆಚ್ಚದಲ್ಲಿ ತಯಾರಿಸುವ ಪ್ರಾಯೋಗಿಕ ಚಿತ್ರಗಳಿಗಾಗಿ ಕೆಲವು ಲಕ್ಷ ರೂಪಾಯಿಗಳನ್ನು ಒದಗಿಸುತ್ತದೆ. ಇದಲ್ಲದೇ ಇತ್ತೀಚೆಗೆ ಸಾಕಷ್ಟು ನಿರ್ಮಾಪಕರು ಮತ್ತು ನಿರ್ದೇಶಕರು ಕಮ್ಮಿ ವೆಚ್ಚದ ಚಿತ್ರಗಳನ್ನು ತಯಾರಿಸುತ್ತಿದ್ದಾರೆ. ಕೆಲವು ಚಿತ್ರಗಳು ನಿಜವಾಗಿಯೂ ಚೆನ್ನಾಗಿವೆ. ಅವು ಕಲಾತ್ಮಕವಾಗಿರುವುದಷ್ಟೇ ಅಲ್ಲದೆ ಮನೋರಂಜನೀಯವೂ ಆಗಿದೆ. ಆದರೆ ಇಂಥ ಚಿತ್ರಗಳನ್ನು ಬಹಳ ಕಮ್ಮಿ ಜನ ನೋಡುತ್ತಾರೆ. ಅಥವಾ ಹೆಚ್ಚು ಖರ್ಚಿನ ಹೆಸರಾಂತ ತಾರಾ ಜೋಡಿಗಳ ಚಿತ್ರಗಳನ್ನೇ ಬಿಡುಗಡೆ ಮಾಡುವ ವ್ಯಾಪಾರೀ ಚಿತ್ರ ಹಂಚಿಕೆ ಸಂಸ್ಥೆಗಳು ಈ ಚಿತ್ರಗಳನ್ನು ಬಿಡುಗಡೆ ಮಾಡುವುದಿಲ್ಲ. ಪಥೇರ್ ಪಾಂಚಾಲಿ, ಶಹರ್ ಔರ್ ಸಪ್ನಾ, ಭುವನ್ ಶೋಂ, ಸಂಸ್ಕಾರ ಮುಂತಾದ ಅಲ್ಪ ಸಂಖ್ಯೆಯ ಚಿತ್ರಗಳು ರಾಷ್ಟ್ರಪತಿಯವರ ಚಿನ್ನದ ಪದಕ ಪಡೆದು ಅಥವಾ ವಿದೇಶೀ ಪ್ರಶಸ್ತಿಗಳನ್ನು ಪಡೆದು ಪ್ರೇಕ್ಷಕರನ್ನು ಆಕರ್ಶಿಸುತ್ತವೆ.

ಆದರೂ ಸಹ ಸರಿಯಾದ ಮಾರ್ಗದಲ್ಲಿ ಇದೊಂದು ಸಣ್ಣ ಹೆಜ್ಜೆ ಮಾತ್ರವಾಗಿದೆ.



# ಚಲನಚಿತ್ರಗಳನ್ನು ಹೇಗೆ ನೋಡಬೇಕು

ಚಿತ್ರಗಳು ಹೇಗೆ ತಯಾರಾಗುತ್ತವೆ, ಅದಕ್ಕೆ ಎಷ್ಟು ಖರ್ಚಾಗುತ್ತದೆ, ತಯಾರಿಕೆ ಮಧ್ಯೆ ಬರುವ ವ್ಯಾಪಾರಿ ತತ್ವಗಳೇನು, ಕಲಾ ನೈಪುಣ್ಯತೆ ಇವೆಲ್ಲಾ ನಿಮಗೆ ಈಗ ಸುಮಾರಾಗಿ ತಿಳಿದಿರುವುದರಿಂದ, ಈಗ ನೀವು ಹೆಚ್ಚು ಬುದ್ಧಿವಂತಿಕೆಯಿಂದ, ವಿವೇಚನೆಯಿಂದ ಚಿತ್ರಗಳನ್ನು ನೋಡುತ್ತೀರೆಂದು ನಂಬಿದ್ದೇನೆ.

ಚಿತ್ರಗಳನ್ನು ನೋಡುವ ಸಾವಿರಾರು ಜನರಿಗೆ ಚೆಂದವಾದ ನಾಯಕ, ಸುಂದರಿ ಆದ ನಾಯಕಿ, ಭಯ ಹುಟ್ಟಿಸುವಂಥ ಖಳನಾಯಕರು ಚಿತ್ರದ ಮುಖ್ಯ ಆಕರ್ಷಣೆ. ಈ ಜನಪ್ರಿಯ ನಾಯಕ ನಾಯಕಿಯರ ಹೆಸರುಗಳೇ ಚಿತ್ರ ನೋಡಲು ಜನರನ್ನು ಆಕರ್ಷಿಸುತ್ತವೆ.

ನಿಮ್ಮ ಅಚ್ಚುಮೆಚ್ಚಿನ ನಾಯಕ ನಾಯಕಿಯರು ಅಭಿನಯಿಸಿರುವ ಅರ್ಥವಿಲ್ಲದ ಕಥೆ, ಕೆಟ್ಟ ನಿರ್ದೇಶನ, ಕೆಟ್ಟ ಚಿತ್ರೀಕರಣ, ಕೆಟ್ಟ ಧ್ವನಿ ಮುದ್ರಣ ಅಥವಾ ತೀರ ಸಾಮಾನ್ಯವಾದ ಸಂಪಾದನೆಯಿಂದ ಕೂಡಿದ ಚಿತ್ರಗಳನ್ನು ನೋಡಿದಾಗ ಅವರ ಅಭಿನಯ ಪ್ರತಿಭೆ ವ್ಯರ್ಥವಾಗಿರುವುದು ನಿಮಗೆ ಅರ್ಥವಾಗುತ್ತದೆ. ಇಂಥ ಚಿತ್ರಗಳಲ್ಲಿ ಇಂಥ ಒಳ್ಳೆ ನಟನಟಿಯರು ಪಾತ್ರವಹಿಸಲು ಹೇಗೆ ತಾನೇ ಒಪ್ಪಿಕೊಂಡರೆಂದು ನಿಮಗೆ ಆಶ್ಚರ್ಯವಾಗುತ್ತದೆ.

ಆದ್ದರಿಂದ ಮುಂದಿನ ಸಾರಿ ಚಿತ್ರ ನೋಡುವಾಗ ಬರೀ 'ಸ್ಟಾರ್'ಗಳಿದ್ದಾರೆಂದೇ ನೋಡಲು ಹೋಗಬೇಡಿ. ನಿರ್ದೇಶಕ, ನಿರ್ಮಾಪಕ, ಲೇಖಕ, ಚಿತ್ರಕಥೆ ಬರೆದವರು, ಸಂಭಾಷಣೆ ಬರೆದವರು, ಛಾಯಾಗ್ರಾಹಕ, ಸಂಪಾದಕ ಇವರೆಲ್ಲರ ಹೆಸರುಗಳನ್ನೂ ತಿಳಿದುಕೊಳ್ಳಲು ಪ್ರಯತ್ನಿಸಿ. ನಿರ್ದೇಶಕನ ಒಟ್ಟು ಮಾರ್ಗದರ್ಶನದಲ್ಲಿ ಚಿತ್ರವನ್ನು ಚೆನ್ನಾಗಿ ಮಾಡುವುದೂ ಕೆಡಿಸುವುದೂ ಇವರುಗಳ ಕೈಯಲ್ಲಿದೆ. ನಿರ್ದೇಶನ ಸರಿಯಿಲ್ಲದಿದ್ದರೆ ಅಥವಾ ಚಿತ್ರಕಥೆ ಸರಿಯಾಗಿ ಬರೆಯದಿದ್ದರೆ ಎಂಥ ಒಳ್ಳೆ ನಟ ನಟಿಯರೂ ಸಹ ತಮ್ಮ ಪ್ರತಿಭೆಯನ್ನು ವ್ಯಕ್ತ ಪಡಿಸಲಾರರು.

ಚಲನಚಿತ್ರಗಳನ್ನು ನೋಡುವಾಗ ಅದರ ಕೆಟ್ಟ ಮತ್ತು ಒಳ್ಳೆಯ ಗುಣಗಳೆರಡನ್ನೂ ವಿಶ್ಲೇಷಿಸಿ ನೋಡುವ ಅಭ್ಯಾಸ ಮಾಡಿಕೊಳ್ಳಿ. ನಿಜವಾಗಿಯೂ ಒಳ್ಳೆ ಚಿತ್ರವಾಗಿದ್ದರೆ ಹಲವು ಸಾರಿ ನೋಡಿ. ಆಗ ನಿರ್ದೇಶನ, ಅಭಿನಯ, ಸಂಭಾಷಣೆ, ಸಂಕಲನ, ಚಿತ್ರೀಕರಣ ಇವೆಲ್ಲದರ ಒಳ್ಳೆ ಮತ್ತು ಕೆಟ್ಟ ಗುಣಗಳನ್ನು ನೀವಾಗಿ ಗಮನಿಸುತ್ತೀರಿ. ಎಲ್ಲಕ್ಕಿಂತ ಹೆಚ್ಚಾಗಿ ನಿಮ್ಮ ಚಿತ್ರ ನೋಡುವ ಆನಂದ ಇಮ್ಮಡಿಯಾಗುತ್ತದೆ.

ಚಿತ್ರ ನೋಡುವ ನಿಮ್ಮಂಥ ಚಿತ್ರ ಪ್ರೇಮಿಗಳಿಂದಲೇ ಪ್ರತಿಯೊಂದು ಚಿತ್ರವೂ ಯಶಸ್ಸು ಅಥವಾ ಅಪಯಶಸ್ಸು ಗಳಿಸುವುದೆಂಬುದನ್ನು ಮರೆಯಬೇಡಿ. ಪ್ರೇಕ್ಷಕರು ಬರೀ ಚಿತ್ರದ ಯಶಸ್ಸಿಗಷ್ಟೇ ಕಾರಣರಲ್ಲ. ಚಿತ್ರದ ಕಲಾತ್ಮಕತೆಯ ಆಳ ಮತ್ತು ತಾಂತ್ರಿಕ ಗುಣಗಳನ್ನು ಸಹ ನಿರ್ಧರಿಸುತ್ತಾರೆ. ಹೇಗೆ? ಕೆಲವು ಚಿತ್ರಗಳನ್ನು ನೋಡಿ ಪ್ರೋತ್ಸಾಹ ಕೊಟ್ಟು ಅಥವಾ ಚಿತ್ರಗಳನ್ನು ನೋಡಲು ನಿರಾಕರಿಸುವುದರ ಮೂಲಕ. ಈ ದೊಡ್ಡ ಜವಾಬ್ದಾರಿಯ ಬಗ್ಗೆ ನೀವು ಮತ್ತು ನಿಮ್ಮ ಸ್ನೇಹಿತರು ಜಾಗೃತರಾಗುವುದು ಒಳ್ಳೆಯದು. ಒಂದು ಒಳ್ಳೆಯ ಚಿತ್ರಕ್ಕೆ ನೀವು ಕೊಂಡ ಟಿಕೆಟ್ ಮತ್ತೊಂದು ಒಳ್ಳೆಯ ಚಿತ್ರದ ತಯಾರಿಕೆಗೆ ಹೇಗೆ ನೆರವಾಗುತ್ತದೋ ಹಾಗೇ ಕೆಟ್ಟ ಚಿತ್ರಕ್ಕೆ ಕೊಂಡ ಟಿಕೆಟ್ ಕೆಟ್ಟ ಚಿತ್ರದ ತಯಾರಿಕೆಗೆ ಪ್ರೋತ್ಸಾಹ ಕೊಡುತ್ತದೆ.

ಒಳ್ಳೆಯ ಚಿತ್ರಗಳ ಗುಣಾವಲೋಕನ ಮಾಡುವ ಅಭಿರುಚಿಯನ್ನು ಬೆಳೆಸಿ ಕೊಂಡು, ಒಳ್ಳೆಯ ಮತ್ತು ಕೆಟ್ಟ ಚಿತ್ರಗಳನ್ನು ಪ್ರತ್ಯೇಕಿಸುವುದನ್ನು ಕಲಿತ ನಂತರ ನೀವೇ ಒಂದು ಚಿತ್ರ ತೆಗೆಯುವ ಆಸಕ್ತಿ ನಿಮ್ಮಲ್ಲಿ ಹುಟ್ಟಬಹುದು. ಪ್ರಾರಂಭದಲ್ಲಿ ನಿಮ್ಮ ಶಾಲೆಯ ಸ್ನೇಹಿತರ ಜೊತೆ ಸೇರಿ 8 ಮಿ.ಮಿ. ಚಿತ್ರವನ್ನೇ ತಯಾರಿಸಬಹುದು

ಸತ್ಯಜಿತ್‌ರೇ ತಮ್ಮ ಕ್ಯಾಮರಾದ ಮೂಲಕ ನೋಡುತ್ತಿರುವುದು ⟶

(ಇಂಗ್ಲೆಂಡ್, ಅಮೇರಿಕಾ, ಸೋವಿಯತ್ ರಷ್ಯಾದಲ್ಲಿನ ಹುಡುಗ ಹುಡುಗಿಯರು ಹೀಗೆ ಮಾಡುತ್ತಾರೆ.) ನಂತರ ಕಾಲೇಜು ಸ್ನೇಹಿತರೊಡನೆ ಕಲೆತು 16 ಮಿ.ಮಿ. ಚಿತ್ರವನ್ನು, ಕೊನೆಗೆ ದೇಶದ ಜನರ ಮನೋರಂಜನೆಗಾಗಿ, ತಿಳುವಳಿಕೆಗಾಗಿ 35 ಮಿ.ಮಿ.ನ ವಾಣಿಜ್ಯ ಚಲನಚಿತ್ರಗಳನ್ನೇ ತಯಾರಿಸಬಹುದು. ಯಾರಿಗೆ ಗೊತ್ತು? ಈ ಚಿಕ್ಕ ಪುಸ್ತಕವನ್ನು ಓದುವ ಮಕ್ಕಳಲ್ಲಿ ಒಬ್ಬರಾದರೂ ಶಾಂತಾರಾಂ, ರಾಜ್‌ಕಪೂರ್, ಹೃಷಿಕೇಶ್ ಮುಖರ್ಜಿ ಅಥವಾ ಸತ್ಯಜಿತ್‌ರೇ ಅವರಂಥ ಶ್ರೇಷ್ಠ ಚಿತ್ರ ತಯಾರಿಕೆಗಾರರಾಗಿ ಅರಳಬಹುದು.



